ಕರ್ನಾಟಕ ರಾಜ್ಯಪತ್ರ
ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯ Volume 149 | ಬೆಂಗಳೂರು, ಗುರುವಾರ, ಮೇ ೧, ೨೦೧೪ (ವೈಶಾಖ ೧೧, ಶಕ ವರ್ಷ ೧೯೩೬) Bangalore, Thursday, May 1, 2014 (Vaishakha 11, Shaka Varsha 1936) | ಸಂಚಿಕೆ ೧೮ Issue 18 |
|---|---|---|

# ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ** : ಶ್ರೀ ಶಿವನಂಜೇಗೌಡ, ಸಿ.ಹೆಚ್.ಸಿ–63, ಕೆಸ್ತೂರು ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರ ಆದೇಶ ಸಂಖ್ಯೆ : ಸಿಬ್ಬಂದಿ(2)/ಡಿಇ/01/09–10, (ಓ.ಬಿ. ಸಂಖ್ಯೆ : 334/09–10) ದಿನಾಂಕ : 28–01–2010.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ : ಅಪೀಲು/12/2013–14, (ಓ.ಬಿ. ಸಂಖ್ಯೆ : 33/2013–14) ದಿನಾಂಕ: 28–10–2013.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 21–11–2013.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು(2)74/2013–14, ದಿನಾಂಕ : 28–01–2014.

**ಪ್ರಸ್ತಾವನೆ :**

ಶ್ರೀ ಶಿವನಂಜೇಗೌಡ, ಸಿ.ಹೆಚ್.ಸಿ–63, ಕೆಸ್ತೂರು ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ಅರಕೆರೆ ಪೊಲೀಸ್ ಠಾಣೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :–**

"ಶ್ರೀ ಶಿವನಂಜೇಗೌಡ, ಸಿ.ಹೆಚ್.ಸಿ–63, ಆದ ನೀವು ಅರಕೆರೆ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ : 24–01–2009 ರಂದು ಸಂಜೆ 5–50 ಗಂಟೆ ಸಮಯದಲ್ಲಿ ಸರ್ಕಾರಿ ಜೀಪ್ ನಂ. ಕೆಎ–11 ಜಿ77ರಲ್ಲಿ ಪಿ.ಎಸ್.ಐ.ರವರೊಡನೆ ಮಂಡ್ಯದಿಂದ ಶ್ರೀರಂಗಪಟ್ಟಣಕ್ಕೆ ವಾಪಸ್ಸು ಹೋಗುವಾಗ ಕೆ. ಶೆಟ್ಟಹಳ್ಳಿ ಹತ್ತಿರ ವಾಹನವನ್ನು ಅತೀ ವೇಗವಾಗಿ ಮತ್ತು ಅಜಾಗರೂಕತೆಯಿಂದ ಚಲಿಸಿ ಮುಂದೆ ಹೋಗುತ್ತಿದ್ದ ಕೆ.ಎಸ್.ಆರ್.ಟಿ.ಸಿ., ಬಸ್ಸನ್ನು ಹಿಂದೆ ಹಾಕಲು ಹೋಗಿ ಎಡಕ್ಕೆ ಚಲಿಸಿ ರಸ್ತೆ ಪಕ್ಕ ನಿಂತಿದ್ದ ಮೋಟಾರ್ ಸೈಕಲ್ ನಂ. ಕೆಎ–11 ಕ್ಯೂ 6046ರ ಸವಾರನಿಗೆ ಮತ್ತು ಆತನ ಪತ್ನಿಗೆ ಡಿಕ್ಕಿ ಹೊಡೆಸಿ ಅಪಘಾತ ಉಂಟು ಮಾಡಿದ್ದರಿಂದ ಮೋಟಾರ್ ಸೈಕಲ್ ಸವಾರ ಸ್ಥಳದಲ್ಲಿ ಮೃತ ಪಟ್ಟಿದ್ದು, ಆತನ ಹೆಂಡತಿಗೆ ಪೆಟ್ಟಾಗಿರುತ್ತೆ. ಈ ಸಂಬಂಧ ಶ್ರೀರಂಗಪಟ್ಟಣ ಪೊಲೀಸ್ ಠಾಣಾ ಮೊ.ಸಂ. 38/2009 ಕಲಂ 279, 337, 304(ಎ) ಐ.ಪಿ.ಸಿ. ರೀತ್ಯಾ ಪ್ರಕರಣ ದಾಖಲಾಗಿರುತ್ತದೆ. ಹೀಗೆ ನೀವು ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ಬೇಜವಾಬ್ದಾರಿತನ ತೋರಿ ವಾಹನ ಚಾಲನೆಯಲ್ಲಿ ಶಿಸ್ತು ಸಂಯಮ ತೊರೆದು ಇಲಾಖೆಯ ಪ್ರತಿಷ್ಠೆಗೆ ಕಳಂಕ ಹಚ್ಚಿರುತ್ತೀರಿ".

ಇಲಾಖಾ ವಿಚಾರಣೆಯಲ್ಲಿ ಆ.ಪೊ.ಅ. ರವರ ವಿರುದ್ಧ ಆರೋಪವು ಸಾಬೀತಾದ ಕಾರಣ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 28–01–2010ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು 2

ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮುಂದೂಡಿ, ದಿನಾಂಕ : 26-01-2009 ರಿಂದ 26-04-2009ರವರೆಗೆ ಅಮಾನತ್ತಿನಲ್ಲಿದ್ದ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿ ದಂಡನೆಯನ್ನು ವಿಧಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ದಕ್ಷಿಣ ವಲಯ, ಮೈಸೂರು ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 28-10-2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಶಿಸ್ತು ಪ್ರಾಧಿಕಾರದ ಆದೇಶದಲ್ಲಿ ಆ.ಪೊ.ಅ. ರವರ ಸೇವೆಯನ್ನು ಪರಿಗಣಿಸಿ, ಇವರ ಕುಟುಂಬದಲ್ಲಿ ಸಮಸ್ಯೆಗಳನ್ನು ಅವಲೋಕಿಸಿ, ಇವರಿಗೆ ತಮ್ಮ ನಡವಳಿಕೆಯನ್ನು ತಿದ್ದಿಕೊಳ್ಳಲು ಅವಕಾಶ ನೀಡಿ, ಹೆಚ್ಚಿನ ಶಿಕ್ಷೆ ವಿಧಿಸಿಲ್ಲದಿರುವುದನ್ನು ಪರಿಗಣಿಸಿ, ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸಲು ಯಾವುದೇ ಸಕಾರಣಗಳು ಇರದ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 170 ಪೊಸಿಅ 2013, ಬೆಂಗಳೂರು, ದಿನಾಂಕ : 17-03-2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶಿವನಂಜೇಗೌಡ, ಸಿ.ಹೆಚ್.ಸಿ-63, ಕೆಸ್ತೂರು ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವೇಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು-ಬಿ).

PR. 345

## ಜಲಸಂಪನ್ಮೂಲ ಸಚಿವಾಲಯ

### ಅಧಿಕೃತ ಜ್ಞಾಪನ

**ಸಂಖ್ಯೆ : ಜಸಂಇ : 224 : ಸೇಸಕಿ : 2013 (ಭಾ-1), ಬೆಂಗಳೂರು, ದಿನಾಂಕ : 28-02-2014.**

**ವಿಷಯ** : ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಯಾಗಿರುವ **ಸಹಾಯಕ ಇಂಜಿನಿಯರ್** (ಸಿವಿಲ್ ಮತ್ತು **ಮೆಕ್ಯಾನಿಕಲ್**) ಅಭ್ಯರ್ಥಿಗಳಿಗೆ ಸಮಾಲೋಚನೆ (counseling) ಮೂಲಕ ಸ್ಥಳ ನಿಯುಕ್ತಿಯನ್ನು ಮಾಡುವ ಬಗ್ಗೆ ಸೂಚನೆಗಳು.

ಜಲಸಂಪನ್ಮೂಲ ಇಲಾಖೆಯಲ್ಲಿನ ಸಹಾಯಕ ಇಂಜಿನಿಯರ್ (ಸಿವಿಲ್ ಮತ್ತು ಮೆಕ್ಯಾನಿಕಲ್) ಹುದ್ದೆಗೆ ಲೋಕಸೇವಾ ಆಯೋಗದಿಂದ ಆಯ್ಕೆಯಾಗಿರುವ ಅಭ್ಯರ್ಥಿಗಳಿಗೆ ಸರ್ಕಾರದಿಂದ ನೇಮಕಾತಿ ಆದೇಶವನ್ನು ಹೊರಡಿಸಲಾಗಿದೆ. ಇದರ ಅನುಸಾರ, ಅಭ್ಯರ್ಥಿಗಳಿಗೆ ಸ್ಥಳ ನಿಯುಕ್ತಿಯ ಆದೇಶವನ್ನು ನೀಡಬೇಕಾಗಿದ್ದು, ಈ ನಿಟ್ಟಿನಲ್ಲಿ ಸ್ಥಳ ನಿಯುಕ್ತಿಯ ಪ್ರಕ್ರಿಯೆಯನ್ನು ಸಮಾಲೋಚನೆ ಮೂಲಕ ಪಾರದರ್ಶಕವಾಗಿ ನಡೆಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ, ಜಲಸಂಪನ್ಮೂಲ ಇಲಾಖೆಯಲ್ಲಿ ಖಾಲಿ ಇರುವ ಸಹಾಯಕ ಇಂಜಿನಿಯರ್ (ಸಿವಿಲ್ ಮತ್ತು ಮೆಕ್ಯಾನಿಕಲ್) ಹುದ್ದೆಗೆ ಅಭ್ಯರ್ಥಿಗಳ ಸ್ಥಳ ನಿಯುಕ್ತಿಯನ್ನು ಅಭ್ಯರ್ಥಿಗಳೊಂದಿಗೆ ಗಣಕೀಕೃತ ಸಮಾಲೋಚನೆ (counseling) ಮೂಲಕವೇ ಭರ್ತಿ ಮಾಡತಕ್ಕದ್ದಾಗಿದೆ. ಹೀಗೆ ಸಮಾಲೋಚನೆ ಮೂಲಕ ಹುದ್ದೆಗಳಿಗೆ ಸ್ಥಳನಿಯುಕ್ತಿಗೊಳಿಸುವಾಗ ಅಥವಾ ಭರ್ತಿ ಮಾಡುವಾಗ ಈ ಕೆಳಕಂಡ ಮಾರ್ಗಸೂಚಿಗಳನ್ನು ಅಳವಡಿಸಿಕೊಳ್ಳತಕ್ಕದ್ದಾಗಿದೆ.

**I. ಮಾರ್ಗದರ್ಶಿ ಸೂಚನೆಗಳ ಅನ್ವಯವಿಕೆ :-**

ಈ ಮಾರ್ಗದರ್ಶಿ ಸೂಚನೆಗಳು ಜಲಸಂಪನ್ಮೂಲ ಇಲಾಖೆಯಲ್ಲಿನ ಸಹಾಯಕ ಇಂಜಿನಿಯರ್ ಹುದ್ದೆಗೆ ಮಾತ್ರ ಅನ್ವಯಿಸುತ್ತವೆ.

**II. ಪ್ರಾಧಾನ್ಯತೆಗಳು :-**

i. ದೈಹಿಕ ಅಂಗವಿಕಲರು

ii. ವಿಧವೆಯರು

iii. ಉದ್ಯೋಗದಲ್ಲಿರುವ ಪತಿ-ಪತ್ನಿ ಪ್ರಕರಣ

iv. ಮಹಿಳೆಯರು

v. ಪುರುಷರು.

**(i) ದೈಹಿಕ ಅಂಗವಿಕಲರು :-**

ಈ ವರ್ಗದ ಅಭ್ಯರ್ಥಿಗಳ ಸ್ಥಳನಿಯುಕ್ತಿಯಲ್ಲಿ ಮೊದಲ ಪ್ರಾಧಾನ್ಯತೆಯನ್ನು ಅಂಗವಿಕಲ ಅಭ್ಯರ್ಥಿಗಳಿಗೆ ನೀಡಿ, ಅದರಂತೆ, ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸುವುದು. ಹೀಗೆ ಈ ವರ್ಗದಿಂದ ಭರ್ತಿ ಮಾಡುವಾಗ ಅಭ್ಯರ್ಥಿಗಳ ಪಟ್ಟಿಯಲ್ಲಿ ಅಂಗವಿಕಲ ಅಭ್ಯರ್ಥಿಗಳ ಅನುಕ್ರಮ ಸ್ಥಾನವನ್ನು/ಜ್ಯೇಷ್ಠತೆಯನ್ನು ಅನುಸರಿಸುವುದು.

**(ii) ವಿಧವೆಯರು :-**

ವಿಧವಾ ಪ್ರಕರಣವಿರುವ ಅಭ್ಯರ್ಥಿಗಳಿಗೆ ಎರಡನೇ ಪ್ರಾಧಾನ್ಯತೆ ನೀಡಿ, ಹುದ್ದೆಗಳನ್ನು ಪಟ್ಟಿಯಲ್ಲಿನ ಜ್ಯೇಷ್ಠತೆ/ರ್ಯಾಂಕಿಂಗ್ ಅನುಸಾರ ಭರ್ತಿ ಮಾಡುವುದು. ಹೀಗೆ ಈ ವರ್ಗದಿಂದ ಭರ್ತಿ ಮಾಡುವಾಗ ವಿಧವಾ ಅಭ್ಯರ್ಥಿಗಳ ನೈಜತೆಯನ್ನು ಖಚಿತಪಡಿಸಿಕೊಳ್ಳುವುದು.

**(iii) ಉದ್ಯೋಗದಲ್ಲಿರುವ ಪತಿ–ಪತ್ನಿ ಪ್ರಕರಣ :–**

ಆಯ್ಕೆ ಪಟ್ಟಿಯಲ್ಲಿನ ಪತಿ–ಪತ್ನಿ ಉದ್ಯೋಗದಲ್ಲಿರುವ ಪ್ರಕರಣಗಳಿಗೆ, ಮೂರನೇ ಪ್ರಾಧಾನ್ಯತೆ ನೀಡುವ ಮೂಲಕ ಮತ್ತು ಪಟ್ಟಿಯಲ್ಲಿ ಅವರುಗಳ ರ್‍ಯಾಂಕಿಂಗ್ ಅನುಸಾರವೇ ಹುದ್ದೆಗಳನ್ನು ಭರ್ತಿ ಮಾಡತಕ್ಕದ್ದು. ಈ ವರ್ಗದ ಅಭ್ಯರ್ಥಿಗಳನ್ನು ಭರ್ತಿ ಮಾಡುವಾಗ, ಅಂತಹ ಅಭ್ಯರ್ಥಿಗಳ ಸತ್ಯಾಸತ್ಯತೆಯನ್ನು ಸೂಕ್ತ ದಾಖಲೆಗಳಿಂದ ಖಚಿತಪಡಿಸಿಕೊಂಡು ಈ ಕೆಳಕಂಡ ಪ್ರಾಧಾನ್ಯತೆಯನ್ನು ನೀಡುವುದು :–

1. ಸರ್ಕಾರಿ ಸೇವೆಯಲ್ಲಿರುವವರು
2. ಸರ್ಕಾರಿ ಒಡೆತನದ ಸಾರ್ವಜನಿಕ ಉದ್ದಿಮೆಗಳಲ್ಲಿರುವವರು
3. ಅನುದಾನಿತ ಸಂಸ್ಥೆಗಳಲ್ಲಿರುವವರು
4. ಖಾಸಗಿ ಕಂಪನಿಗಳು/ಉದ್ದಿಮೆಗಳಲ್ಲಿರುವವರು

**(iv) ಮಹಿಳೆಯರು**

ಈ ಮೇಲಿನ ಮೂರು ವರ್ಗಗಳ ಪ್ರಕ್ರಿಯೆಯ ನಂತರ, ಖಾಲಿ ಇರುವ ಹುದ್ದೆಗಳನ್ನು ಪಟ್ಟಿಯಲ್ಲಿನ ಮಹಿಳಾ ಅಭ್ಯರ್ಥಿಗಳಿಗೆ ನಾಲ್ಕನೇ ಪ್ರಾಧಾನ್ಯತೆ ನೀಡಿ ಮತ್ತು ಪಟ್ಟಿಯಲ್ಲಿ ಮಹಿಳಾ ಅಭ್ಯರ್ಥಿಗಳ ರ್‍ಯಾಂಕಿಂಗ್ ಅನುಸಾರವೇ ಸ್ಥಳ ನಿಯುಕ್ತಿಗೊಳಿಸುವುದು.

**(v) ಪುರುಷರು**

ಅಂತಿಮವಾಗಿ, ಖಾಲಿ ಇರುವ ಹುದ್ದೆಗಳಿಗೆ ಅಭ್ಯರ್ಥಿಗಳ ಪಟ್ಟಿಯಲ್ಲಿ ಉಳಿದಿರುವಂತ ಅಭ್ಯರ್ಥಿಗಳ ಜೇಷ್ಠತೆ/ರ್‍ಯಾಂಕಿಂಗ್ ಅನುಸಾರ ಹುದ್ದೆಗಳಿಗೆ ಸ್ಥಳ ನಿಯುಕ್ತಿಗೊಳಿಸುವುದು.

**III. ಸಮಾಲೋಚನಾ ಪ್ರಾಧಿಕಾರ :–**

ಲೋಕಸೇವಾ ಆಯೋಗದಿಂದ ಆಯ್ಕೆಗೊಂಡ ಸಹಾಯಕ ಇಂಜಿನಿಯರ್‌ಗಳಿಗೆ ಸಮಾಲೋಚನೆ ಮೂಲಕ ಸ್ಥಳ ನಿಯುಕ್ತಿಗೊಳಿಸಲು ಸರ್ಕಾರದ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ ರವರನ್ನು **"ಸಮಾಲೋಚನಾ ಪ್ರಾಧಿಕಾರ"** ವೆಂದು ನೇಮಿಸಲಾಗಿದೆ. ಸಮಾಲೋಚನೆಯು ಈ ಕೆಳಗಿನ ಪ್ರಕ್ರಿಯೆಗಳನ್ನು ಒಳಗೊಂಡಿರುತ್ತದೆ.

1. ಸಮಾಲೋಚನಾ ಮಾರ್ಗದರ್ಶಿ ಸೂಚನೆಗಳನ್ನು ಪತ್ರಿಕಾ ಪ್ರಕಟಣೆ ಮೂಲಕ ವ್ಯಾಪಕವಾಗಿ ಪ್ರಚಾರಪಡಿಸುವುದು.
2. ತದನಂತರ ಖಾಲಿ ಹುದ್ದೆಗಳ ವಿವರಗಳನ್ನು ಸೂಚನಾ ಫಲಕದಲ್ಲಿ ಪ್ರಕಟಿಸುವುದು.
3. ಈ ಅಧಿಕೃತ ಜ್ಞಾಪನ ಹೊರಡಿಸಿದ ಒಂದು ವಾರದೊಳಗಾಗಿ ಎಲ್ಲಾ ಅಭ್ಯರ್ಥಿಗಳಿಗೆ, ಈ ಜ್ಞಾಪನದ ಪ್ರಾಧಾನ್ಯತೆಯ ಅಂಶಗಳನ್ನು ಪತ್ರದಲ್ಲಿ ನಮೂದಿಸಿ, ಅವರಿಂದ ಅಗತ್ಯ ಮಾಹಿತಿ ಪಡೆಯಲು ನೋಂದಣಿ ಅಂಚೆ ಸ್ವೀಕೃತಿ (ಆರ್.ಪಿ.ಎ.ಡಿ) ಮೂಲಕ ನೋಟೀಸ್ ಕಳುಹಿಸುವುದು.
4. ಅಭ್ಯರ್ಥಿಗಳಿಗೆ ಮಾಹಿತಿಯನ್ನು ಒದಗಿಸಲು 7 ದಿನಗಳ ಕಾಲಾವಕಾಶ ನೀಡುವುದು.
5. ಮಾಹಿತಿ ಬಾರದೆ ಇರುವಂತಹ ಅಭ್ಯರ್ಥಿಗಳ ಸ್ಥಳ ನಿಯುಕ್ತಿಯ ಸಮಾಲೋಚನೆ ಪ್ರಕ್ರಿಯೆಯನ್ನು ಪ್ರಾಧಾನ್ಯತೆ 5 ರಲ್ಲಿನ ಪುರುಷ ವರ್ಗದ ನಂತರ ನಡೆಸುವುದು.
6. ಅಭ್ಯರ್ಥಿಗಳಿಂದ ಮಾಹಿತಿ ಪಡೆದ ನಂತರ, ಆದ್ಯತಾ ಪಟ್ಟಿಯ ಅನುಸಾರ 7 ದಿನಗಳೊಳಗೆ ಡಾಟಾ ಬೇಸ್ ತಯಾರಿಸುವುದು.
7. ಪ್ರತಿಯೊಂದು ಪ್ರಾಧಾನ್ಯತೆಯ ವರ್ಗಗಳಿಗೆ ಸಮಾಲೋಚನೆಯ ದಿನಾಂಕವನ್ನು ಪೂರ್ವಭಾವಿಯಾಗಿ ಗೊತ್ತುಪಡಿಸಿ ಪ್ರಕಟಿಸುವುದು.
8. ಪ್ರಾಧಾನ್ಯತೆಯ ಪ್ರಕಾರ ಆಯಾ ವರ್ಗದ ಸಮಾಲೋಚನೆ ಪ್ರಕ್ರಿಯೆಯು ಮುಗಿದ ದಿನಾಂಕದಂದು ಸ್ಥಳ ನಿಯುಕ್ತಿಗೆ ಆಯ್ಕೆಯಾದ ಅಭ್ಯರ್ಥಿಗಳ ಪಟ್ಟಿಯನ್ನು ಅಂದೇ ಸೂಚನಾ ಫಲಕದಲ್ಲಿ ಪ್ರಕಟಿಸುವುದು.
9. ಈ ಎಲ್ಲಾ ಪ್ರಕ್ರಿಯೆಗಳನ್ನು ನಿಗದಿತ ಕಾಲಾವಧಿಯೊಳಗೆ ಮುಗಿಸಲು ಒಂದು ವೇಳಾ ಪಟ್ಟಿಯನ್ನು ತಯಾರಿಸಿ ಪ್ರಕಟಿಸುವುದು.

ಸಮಾಲೋಚನೆ ಪ್ರಕ್ರಿಯೆಯನ್ನು ಯುಕ್ತ ಕಾಲಾವಧಿಯೊಳಗೆ ಕ್ರಮಬದ್ಧವಾಗಿ ಆದಷ್ಟು ಬೇಗನೆ ಪೂರ್ಣಗೊಳಿಸಿ ಅಭ್ಯರ್ಥಿಗಳಿಗೆ ಸ್ಥಳ ನಿಯುಕ್ತಿ ಆದೇಶ ನೀಡುವುದು.

**ಶಂಕರ್ ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸೇವೆಗಳು–ಬಿ).

**PR. 331**
**SC-200**

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಮೈಸೂರು ವಿಮಾನ ನಿಲ್ದಾಣದ ವಿದ್ಯುಚ್ಛಕ್ತಿ ಬಿಲ್ಲನ್ನು ಪಾವತಿಸಲು ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ವಿಮಾನ ನಿಲ್ದಾಣ ನಿಯಂತ್ರಕರು, ಭಾರತೀಯ ವಿಮಾನ ನಿಲ್ದಾಣಗಳ ಪ್ರಾಧಿಕಾರ, ಮೈಸೂರು ವಿಮಾನ ನಿಲ್ದಾಣ, ಇವರ ಪತ್ರ ಸಂ. AAI/MYS/APC/CESCOM/2010/2036, ದಿನಾಂಕ : 08–10–2010.
2. ಸರ್ಕಾರಿ ಆದೇಶ ಸಂಖ್ಯೆ : ಮೂಅಇ 48 ರಾಅವಿ 2010, ದಿನಾಂಕ : 20–05–2011
3. ಸರ್ಕಾರಿ ಆದೇಶ ಸಂಖ್ಯೆ : ಮೂಅಇ 48 ರಾಅವಿ 2010, ದಿನಾಂಕ : 16–11–2011
4. ಸರ್ಕಾರಿ ಆದೇಶ ಸಂಖ್ಯೆ : ಮೂಅಇ 48 ರಾಅವಿ 2010, ದಿನಾಂಕ : 28–01–2012
5. ಸರ್ಕಾರಿ ಆದೇಶ ಸಂಖ್ಯೆ : ಮೂಅಇ 48 ರಾಅವಿ 2010, ದಿನಾಂಕ : 20–03–2012

6. ಸರ್ಕಾರಿ ಆದೇಶ ಸಂಖ್ಯೆ : ಮೂಅಇ 48 ರಾಅವಿ 2010, ದಿನಾಂಕ : 06–08–2012 ಮತ್ತು ತಿದ್ದುಪಡಿ ಆದೇಶ ದಿನಾಂಕ : 14–09–2012.
7. ಸರ್ಕಾರಿ ಆದೇಶ ಸಂಖ್ಯೆ : ಮೂಅಇ 48 ರಾಅವಿ 2010, ದಿನಾಂಕ : 14–09–2012
8. ಸರ್ಕಾರಿ ಆದೇಶ ಸಂಖ್ಯೆ : ಮೂಅಇ 48 ರಾಅವಿ 2010, ದಿನಾಂಕ : 22–03–2013
9. ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್ (ವಿ), ಚಾವಿಸನಿನಿ, ಚಾಮುಂಡಿಪುರಂ ಉಪವಿಭಾಗ, ಮೈಸೂರು ಇವರ ಪತ್ರ ಸಂಖ್ಯೆ : ಸಕಾಇಂ (ವಿ)/ಚಾಉವಿ/ಸ.ಲೆ./ಹಿ.ಸ–2/2013–14/4380–84, ದಿನಾಂಕ : 23–01–2014.
10. ವಿಮಾನ ನಿಲ್ದಾಣ ನಿರ್ದೇಶಕರು, ಮೈಸೂರು ವಿಮಾನ ನಿಲ್ದಾಣ, ಭಾರತೀಯ ವಿಮಾನ ನಿಲ್ದಾಣ ಪ್ರಾಧಿಕಾರ ಇವರ ಪತ್ರ ಸಂಖ್ಯೆ : AAI/MYS/APD/GOK/2014/4120-23, ದಿನಾಂಕ : 27–01–2014.
11. ಅಪರ ಜಿಲ್ಲಾಧಿಕಾರಿ, ಮೈಸೂರು ಜಿಲ್ಲೆ, ಮೈಸೂರು ಇವರ ಪತ್ರ ಸಂ. ಎಲ್.ಎ.ಕ್ಯೂ. ಸಿ.ಆರ್. 72/2011–12, ದಿನಾಂಕ : 30–01–2014.

**ಪ್ರಸ್ತಾವನೆ :**

ಮೈಸೂರು ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ರಾಜ್ಯ ಸರ್ಕಾರವು ದಿನಾಂಕ : 06–10–2005 ರಂದು ಭಾರತ ವಿಮಾನ ನಿಲ್ದಾಣಗಳ ಪ್ರಾಧಿಕಾರದೊಂದಿಗೆ ಮಾಡಿಕೊಂಡಿರುವ ಒಪ್ಪಂದದ ಅನುಸಾರ ವಿಮಾನ ನಿಲ್ದಾಣದ ವಿದ್ಯುಚ್ಛಕ್ತಿ ಬಳಕೆ ಬಿಲ್ಲನ್ನು ವಿಮಾನಯಾನ ಸೇವೆ ಕಾರ್ಯಾರಂಭಗೊಂಡ ದಿನಾಂಕದಿಂದ 5 ವರ್ಷಗಳ ಅವಧಿಗೆ ರಾಜ್ಯ ಸರ್ಕಾರದಿಂದ ಭರಿಸಬೇಕಾಗಿರುತ್ತದೆ.

2. ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ವಿಮಾನ ನಿಲ್ದಾಣ ನಿಯಂತ್ರಕರು, ಭಾರತೀಯ ವಿಮಾನ ನಿಲ್ದಾಣಗಳ ಪ್ರಾಧಿಕಾರ, ಇವರು ಮೈಸೂರು ಜಿಲ್ಲಾಧಿಕಾರಿಗಳಿಗೆ ಬರೆದಿರುವ ಪತ್ರದಲ್ಲಿ ಮೈಸೂರು ವಿಮಾನ ನಿಲ್ದಾಣವು ದಿನಾಂಕ : 01–10–2010 ರಿಂದ ಕಾರ್ಯಾರಂಭಗೊಂಡಿದೆಯೆಂದು ಸೆಪ್ಟೆಂಬರ್ 2009 ರಿಂದ ಸೆಪ್ಟೆಂಬರ್ 2010 ರ ವರೆಗಿನ ವಿದ್ಯುತ್‌ಚ್ಛಕ್ತಿ ಬಿಲ್ಲನ್ನು ಭಾರತೀಯ ವಿಮಾನ ನಿಲ್ದಾಣಗಳ ಪ್ರಾಧಿಕಾರದಿಂದ ಪಾವತಿಸಲಾಗಿದೆ ಎಂದು ತಿಳಿಸಿರುತ್ತಾರೆ. ಮೇಲೆ ಓದಲಾದ ಕ್ರಮ ಸಂಖ್ಯೆ 2 ರಿಂದ 8ರಲ್ಲಿನ ಸರ್ಕಾರದ ಆದೇಶಗಳಲ್ಲಿ ಮೈಸೂರು ವಿಮಾನ ನಿಲ್ದಾಣ ಕಾರ್ಯಾರಂಭಗೊಂಡ ದಿನದಿಂದ ಫೆಬ್ರವರಿ 2013ರ ಅಂತ್ಯದವರೆಗೆ ಮೈಸೂರು ವಿಮಾನ ನಿಲ್ದಾಣದ ವಿದ್ಯುಚ್ಛಕ್ತಿ ಬಿಲ್ಲನ್ನು ಪಾವತಿಸಲು ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರಿಗೆ ಹಣ ಬಿಡುಗಡೆ ಮಾಡಲಾಗಿದೆ.

3. ಮೇಲೆ ಕ್ರಮ ಸಂಖ್ಯೆ (9)ರಲ್ಲಿ ಓದಲಾದ ಪತ್ರದಲ್ಲಿ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತದ ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್ (ವಿ), ಚಾಮುಂಡಿಪುರಂ ಉಪ ವಿಭಾಗ, ಇವರು ಮಾರ್ಚ್ 2013 ರಿಂದ ಜನವರಿ 2014ರವರೆಗಿನ ವಿದ್ಯುಚ್ಛಕ್ತಿ ಬಿಲ್ಲಿನ ತಿಂಗಳವಾರು ಮೊತ್ತದ ವಿವರಗಳನ್ನು ನೀಡಿದ್ದು, ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರು ಸ್ಥಿರೀಕರಿಸುವುದಿಲ್ಲ. ಕ್ರಮ ಸಂಖ್ಯೆ (10)ರಲ್ಲಿ ಓದಲಾದ ಪತ್ರದಲ್ಲಿ ವಿಮಾನ ನಿಲ್ದಾಣ ನಿರ್ದೇಶಕರು, ಮೈಸೂರು ವಿಮಾನ ನಿಲ್ದಾಣ, ಭಾರತೀಯ ವಿಮಾನ ನಿಲ್ದಾಣ ಪ್ರಾಧಿಕಾರ ಇವರು ಬಾಕಿ ಇರುವ ವಿದ್ಯುಚ್ಛಕ್ತಿ ಬಿಲ್ಲು ಪಾವತಿಸದಿದ್ದಲ್ಲಿ, ವಿದ್ಯುಚ್ಛಕ್ತಿಯನ್ನು ಕಡತಗೊಳಿಸಲಾಗುವುದೆಂದು ತಿಳಿಸಿರುವ ಹಿನ್ನೆಲೆಯಲ್ಲಿ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತದ ಸಹಾಯಕ ಕಾರ್ಯ ನಿರ್ವಾಹಕ ಇಂಜಿನಿಯರ್ (ವಿ) ಚಾಮುಂಡಿಪುರಂ ಉಪ ವಿಭಾಗ, ಮೈಸೂರು ಇವರು ನೀಡಿರುವ ತಿಂಗಳವಾರು ಮೊತ್ತದ ವಿವರಗಳನ್ನು ಪರಿಗಣಿಸಿ ಮೈಸೂರು ವಿಮಾನ ನಿಲ್ದಾಣಕ್ಕೆ ಮಾರ್ಚ್ 2013 ರಿಂದ ಡಿಸೆಂಬರ್ 2013ರ ಅವಧಿಯ ಅಂತ್ಯಕ್ಕೆ ಬಾಕಿ ಇರುವ ವಿದ್ಯುಚ್ಛಕ್ತಿ ಬಿಲ್ಲಿನ ಮೊತ್ತ ರೂ. 45,41,341.00 ಗಳನ್ನು ಬಿಡುಗಡೆ ಮಾಡುವಂತೆ ಅಪರ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರು ಮೇಲೆ ಓದಲಾದ ಉಲ್ಲೇಖ (11)ರ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

4. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮೂಅಇ 48 ರಾಅವಿ 2010, ಬೆಂಗಳೂರು, ದಿನಾಂಕ : 07–02–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮೈಸೂರು ವಿಮಾನ ನಿಲ್ದಾಣದ ಮಾರ್ಚ್ 2013ರಿಂದ ಡಿಸೆಂಬರ್ 2013 ಅಂತ್ಯದವರೆಗೆ ವಿದ್ಯುಚ್ಛಕ್ತಿ ಬಳಕೆ ಬಿಲ್ಲಿನ ಮೊತ್ತ ರೂ. 45,41,321–00 (ನಲವತ್ತೈದು ಲಕ್ಷಗಳ ನಲವತ್ತೊಂದು ಸಾವಿರದ ಮೂನ್ನೂರ ನಲವತ್ತೊಂದು ರೂಪಾಯಿಗಳು ಮಾತ್ರ) ಗಳನ್ನು ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರಿಗೆ ಈ ಕೆಳಕಂಡ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

> ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರು **"**ಪ್ರತಿ ತಿಂಗಳ ಬಿಲ್ಲಿನೊಂದಿಗೆ ಇದುವರೆವಿಗೂ ಸರ್ಕಾರದಿಂದ ಬಿಡುಗಡೆಯಾಗಿರುವ ಮೊತ್ತದಲ್ಲಿ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ ಇವರಿಗೆ ಪಾವತಿಯಾಗಿರುವ ಮೊತ್ತಗಳ ವಿವರಗಳನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು**"**.

2. ಈ ಮೊತ್ತವನ್ನು 2013–14ನೇ ಸಾಲಿನ ಲೆಕ್ಕ ಶೀರ್ಷಿಕೆ **"3451–00–090–1–11–071 'ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿ (ಯೋಜನೆ) ಕಟ್ಟಡ ವೆಚ್ಚಗಳು"** ಇದರಡಿಯಲ್ಲಿ ಒದಗಿಸಿರುವ ರೂ. 60.00 ಲಕ್ಷಗಳಿಂದ ಭರಿಸತಕ್ಕದ್ದು.

3. ಈ ಹಣವನ್ನು ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರು ಜಿಲ್ಲಾ ಖಜಾನೆ ಮೈಸೂರು ಇಲ್ಲಿ ಡಿ.ಸಿ. ಬಿಲ್ ಮೂಲಕ ಡ್ರಾ ಮಾಡಲು ಅಧಿಕರಿಸಿದೆ. ಉಪ ನಿರ್ದೇಶಕರು, ಟಿ.ಎನ್.ಎಂ.ಸಿ. ಬೆಂಗಳೂರು, ಇವರು ಈ ಮೊತ್ತವನ್ನು ಮೈಸೂರು ಜಿಲ್ಲಾಧಿಕಾರಿಗಳ ಖಾತೆಗೆ ಅಪ್‌ಲೋಡ್ ಮಾಡುವುದು. ಈ ಹಣವನ್ನು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ, ಮೈಸೂರು ಇವರಿಗೆ ಜಮಾ ಮಾಡಿ ಸ್ವೀಕೃತಿ ಪಡೆದು ಸ್ವೀಕೃತಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

4. ಈ ಆದೇಶವನ್ನು ಸರ್ಕಾರಿ ಆದೇಶ ಸಂ. ಆಇ 1 ಟಿಎಫ್‌ಪಿ 2013, ದಿನಾಂಕ : 10–05–2013ರಲ್ಲಿ ಸರ್ಕಾರದ ಇಲಾಖಾ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ಪ್ರತ್ಯಾ ಯೋಜನೆ ನೀಡಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR. 332** **ರಾಬಿನ್ ವನರಾಜ್ ಜೆ.**

**SC-50** ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

## INFRASTRUCTURE DEVELOPMENT SECRETARIAT

**Sub :** Payment of fees to iDeCK for Project Management and Consultancy Services for Gulbarga Airport project.

**Read :**

1. G.O. No. IDD 85 DIA 2008 dated 12.08.2009.
2. Letter No. iDeCK/2011-2012/ 886 dated: 16.09.2011.
3. G.O. No. IDD 85 DIA 2008 dated 09.11.2011.
4. G.O. No.IDD 85 DIA 2008 dated 28.01.2012.
5. G.O.No.IDD 85 DIA 2008 dated 27.04.2012.
6. G.O.No.IDD 85 DIA 2008 dated 25.07.2012.
7. Government Notification No.FD 790 Exp-12/12 dated 14.09.2012.
8. G.O.No.IDD 85 DIA 2008 dated 25.10.2012.
9. G.O. No.IDD 85 DIA 2008 dated 18.02.2013
10. Letter No. iDeCK/2012-13/ 1503 dated 05.03.2013 of the Chief Financial Officer & Company Secretary, iDeCK, Bangalore.
11. Government Notification No. FD 1005 Exp-12/13, dated 17.12.2013.

**Preamble :**

In the G.O. read at (1) above, Government has accorded approval for the scope of services and sanction for payment of fees to iDeCK for project management and Consultancy services for Gulbarga Airport Development Project at the rate not exceeding of RS.3,00,000 per month (exclusive of applicable service tax) for the project for a period of twelve months.

2. In the letter read at (2) above, the President, iDeCK, Bangalore, has stated that construction of Airport has been started only in April/ May, 2011 and iDeCK has deployed their engineers at site from 01.06.2011 for supervision.

3. In the G.O.s read at (3), (4), (5), (6), (8) & (9) above, an amount of Rs.60,05,640/- has been released to iDeCK for the period of June 2011 to November 2012 for project management and consultancy services.

4. In Government Notification read at (7) above, exemption for procuring the services of iDeCK under the provisions of 4(g) of the KTPP Act 1999 has been extended for the period from January 2012 to December 2012.

5. In the letter read at (10) above, the Chief Financial Officer & Company Secretary, iDeCK, Bangalore has sent invoices for RS.10,11,240/- towards payment of fees to iDeCK for project management and consultancy services for the months of December 2012, January 2013 and February 2013. Finance Department was requested to extend the period of exemption under 4(g) of KTPP Act 1999 to continue the PMC services of iDeck for Gulbarga Airport project. ~

6. In Government Notification read at (11) above, exemption under the provisions of 4(g) of the KTPP Act 1999 for PMC services for Gulbarga Airport project, for procuring the services of iDeCK has been extended up to December 2014.

7. The proposal has been examined in detail and hence this order

### GOVERNMENT ORDER NO. IDD 85 DIA 2008, BANGALORE DATED: 06-02-2014.

In the circumstances explained in the preamble, Sanction is accorded for release of Rs.10,11,240/- (Rupees Ten Lakhs Eleven Thousand Two Hundred and Forty only) towards fees to iDeCK for Project Management and Consultancy Services for the Gulbarga Airport Project for the months of December 2012, January 2013 and February 2013.

2. This amount shall be met under the Head of Account **"5465-01-190-1-05-133-Special Development Plan" during 2013-14.**

3. The Chief Financial 0fficer, iDeCK, Bangalore is authorized to draw the above amount on a payees receipt duly countersigned by the Under Secretary to Government, Infrastructure Development Department, Bangalore.

4. This order is issued in accordance with the financial powers delegated to Principal Secretaries/Secretaries to Government vide G.O No FD 1 TFP, dated: 10-05-2013 and FD Notification No: FD 1005 Exp-12/13 dated: 17-12-2013.

By Order and in the name of the Governor of Karnataka

**P.R. 333**

**SC-30**

**Robin Vanaraj J.**

Under Secretary to Government (I/C),

Infrastructure Development Department.

**ಒಳಾಡಳಿತ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ : ಒಇ 33 ಪೊಸಿಪ 2013, ಬೆಂಗಳೂರು, ದಿನಾಂಕ : 12-03-2014.**

ಶ್ರೀ ಎಸ್.ಬಿ. ಛಬ್ಬಿ, ಸಿಪಿಐರವರು ಭಾರತೀಯ ಸೇನೆಯಲ್ಲಿ ಸೇವೆ ಸಲ್ಲಿಸಿದ್ದ ಅವಧಿಯನ್ನು ಪಿಂಚಣಿ ಉದ್ದೇಶಗಳಿಗಾಗಿ ಮಾತ್ರ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಮಂಜೂರಾತಿ ನೀಡಿರುವ ಸರ್ಕಾರದ ಆದೇಶ ಸಂಖ್ಯೆ : ಒಇ 33 ಪೊಸಿಪ 2013, ದಿನಾಂಕ : 18-01-2014ರ ಆದೇಶದ ಪ್ರಸ್ತಾವನೆಯ 2ನೇ ಸಾಲಿನಲ್ಲಿ ಭಾರತೀಯ ಸೇನೆಯ **ಇ.ಎಂ.ಕೋರ್**ನಲ್ಲಿ ಎಂಬ ಪದಗಳಿಗೆ ಬದಲಾಗಿ ಭಾರತೀಯ ಸೇನೆಯ **ಇ.ಎಂ.ಇ. ಕೋರ್**ನಲ್ಲಿ ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವೇಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**PR. 334**

**ಒಳಾಡಳಿತ ಸಚಿವಾಲಯ**

**ವಿಷಯ :** ಡಾ॥ ಎಸ್. ಮಾಲಿನಿ, ಸಹಾಯಕ ನಿರ್ದೇಶಕರು, ಎಫ್ಎಸ್ಎಲ್, ಬೆಂಗಳೂರು ಇವರಿಗೆ ನ್ಯಾಯಾಲಯದ ಆದೇಶದ ಅನುಸಾರ ತತ್ಪರಿಣಾಮವಾಗಿ ಲಭ್ಯವಾಗುವ ಎಲ್ಲಾ ಸೌಲಭ್ಯಗಳನ್ನು ನೀಡುವ ಬಗ್ಗೆ.

**ಓದಲಾಗಿದೆ :**

1. ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿರುವ ನಿಂದನಾ ಪ್ರಕರಣ ಸಂಖ್ಯೆ : 595/2014.
2. ಸರ್ಕಾರದ ಆದೇಶ ಸಂಖ್ಯೆ : ಒಇ 21 ಪೊಸಿಲಿ 2014, ದಿನಾಂಕ : 15-03-2014.
3. ಕರ್ನಾಟಕ ಉಚ್ಚ ನ್ಯಾಯಾಲಯದ ಸರ್ಕಾರಿ ವಕೀಲರ ಪತ್ರ ದಿನಾಂಕ : 17-03-2014.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಡಾ॥ ಮಾಲಿನಿ ಇವರು ಕರ್ನಾಟಕ ಉಚ್ಚನ್ಯಾಯಾಲಯದ ತೀರ್ಪು ದಿನಾಂಕ : 15-04-2013ರನ್ನು ಅನುಷ್ಠಾನಗೊಳಿಸದಿರುವುದರಿಂದ ನಿಂದನಾ ಅರ್ಜಿಯನ್ನು ಸಲ್ಲಿಸಿ, ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ತೀರ್ಪಿನಲ್ಲಿ ನಿರ್ದೇಶಿಸಿದಂತೆ ತಮಗೆ ತತ್ಪರಿಣಾಮವಾಗಿ ದೊರಕುವ ಎಲ್ಲಾ ಸೌಲಭ್ಯಗಳನ್ನು ನೀಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ಸರ್ಕಾರದ ಆದೇಶದಲ್ಲಿ ಡಾ॥ ಎಸ್. ಮಾಲಿನಿ, ಸಹಾಯಕ ನಿರ್ದೇಶಕರು, ಎಫ್ಎಸ್ಎಲ್, ಬೆಂಗಳೂರು ಇವರನ್ನು ಸರ್ಕಾರದ ಸೇವೆಯಿಂದ ಡಿಸ್‌ಚಾರ್ಜ್ ಮಾಡಿದ ದಿನಾಂಕ : 28-02-2009 ರಿಂದ ಸರ್ಕಾರದ ಸೇವೆಗೆ ಪುನರ್ ನೇಮಕ ಮಾಡಿದ ಆದೇಶದನ್ವಯ ಕರ್ತವ್ಯಕ್ಕೆ ವರದಿ ಮಾಡಿಕೊಂಡ ದಿನಾಂಕ : 21-11-2013ರವರೆಗಿನ ಅವಧಿಯನ್ನು ಲೆಕ್ಕಕ್ಕಿಲ್ಲದ ಅವಧಿ ಎಂದು ಪರಿಗಣಿಸಿ ಆದೇಶಿಸಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ವಕೀಲರು ಡಾ॥ ಎಸ್. ಮಾಲಿನಿ ಇವರ ನಿಂದನಾ ಪ್ರಕರಣದಲ್ಲಿ ಕೋರ್ಟ್‌ಹಾಲ್ ನಲ್ಲಿ ಹಾಜರಿದ್ದು. ಮಾನ್ಯ ನ್ಯಾಯಾಧೀಶರುಗಳು ಸದರಿ ಪ್ರಕರಣವನ್ನು ಗಂಭೀರವಾಗಿ ಪರಿಗಣಿಸಿ ನ್ಯಾಯಾಲಯವು ರಿಟ್ ಪಿಟಿಷನ್ ಸಂಖ್ಯೆ : 23406/2010 (ಎಸ್-ಕೆಎಟಿ) ತೀರ್ಪು ದಿನಾಂಕ : 15-04-2013ರಲ್ಲಿ ನಿರ್ದೇಶಿಸಿದಂತೆ ಅರ್ಜಿದಾರರಿಗೆ ಕೆಲಸಕ್ಕೆ ಪುನರ್ ನೇಮಕ ಮಾಡಿಕೊಂಡ ದಿನಾಂಕದಿಂದ ಎಲ್ಲಾ ತತ್ಪರಿಣಾಮದ ಸೌಲಭ್ಯಗಳನ್ನು ನೀಡುವಂತೆ ಆದೇಶಿಸಿದಾಗ್ಯೂ, ಸರ್ಕಾರ ಆದೇಶ ದಿನಾಂಕ : 15-03-2014 ರಲ್ಲಿ ವ್ಯತಿರಿಕ್ತವಾಗಿ ಆದೇಶಿಸಿರುವುದರಿಂದ ಸದರಿ ಆದೇಶವನ್ನು ಹಿಂಪಡೆದು ನ್ಯಾಯಾಲಯದ ಆದೇಶವನ್ನು ಅನುಷ್ಠಾನಗೊಳಿಸುವಂತೆ ಮತ್ತು ಅನುಷ್ಠಾನಗೊಳಿಸಿದ ಆದೇಶವನ್ನು ಮುಂದಿನ 48 ಗಂಟೆಗಳಲ್ಲಿ ನ್ಯಾಯಾಲಯಕ್ಕೆ ಸಲ್ಲಿಸದಿದ್ದಲ್ಲಿ ಪ್ರತಿವಾದಿಯು ವೈಯಕ್ತಿಕವಾಗಿ ನ್ಯಾಯಾಲಯದ ಮುಂದೆ ಹಾಜರಾಗಿ ಆರೋಪದ ಬಗ್ಗೆ ನ್ಯಾಯಾಲಯದಲ್ಲಿ ಉತ್ತರಿಸಬೇಕಾಗುತ್ತದೆ ಎಂದು ತಿಳಿಸಿ ಪ್ರಕರಣವನ್ನು ನ್ಯಾಯಾಲಯವು ದಿನಾಂಕ : 19-03-2014ಕ್ಕೆ ಮುಂದೂಡಲಾಗುತ್ತದೆ ಎಂದು ತಿಳಿಸಿರುತ್ತಾರೆ.

ಆದುದರಿಂದ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ವಕೀಲರು ತಮ್ಮ ಪತ್ರದಲ್ಲಿ ತಿಳಿಸಿರುವಂತೆ ಡಾ॥ ಎಸ್. ಮಾಲಿನಿ, ಸಹಾಯಕ ನಿರ್ದೇಶಕರು, ಎಫ್ಎಸ್ಎಲ್, ಬೆಂಗಳೂರು ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಿದ ದಿನಾಂಕ : 28-02-2009 ರಿಂದ ಪುನರ್ ನೇಮಕ ಮಾಡಿ ಅವರು ಕರ್ತವ್ಯಕ್ಕೆ ವರದಿ ಮಾಡಿಕೊಂಡ ಪೂರ್ವದ ದಿನಾಂಕ : 21-12-2013ರವರೆಗಿನ ಅವಧಿಯನ್ನು ಕರ್ತವ್ಯದ ಅವಧಿ ಎಂದು ಪರಿಗಣಿಸಿ ತತ್ಪರಿಣಾಮವಾಗಿ ಲಭ್ಯವಾಗುವ ಎಲ್ಲಾ ಸೌಲಭ್ಯಗಳನ್ನು ನೀಡಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶವನ್ನು ಮಾಡಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 21 ಪೊಸಿಲಿ 2014, ಬೆಂಗಳೂರು, ದಿನಾಂಕ : 17-03-2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ : ಒಇ 21 ಪೊಸಿಲಿ 2014, ದಿನಾಂಕ : 15-03-2014 ಅನ್ನು ಹಿಂಪಡೆದು ಡಾ॥ ಎಸ್. ಮಾಲಿನಿ, ಸಹಾಯಕ ನಿರ್ದೇಶಕರು, ಎಫ್.ಎಸ್.ಎಲ್. ಬೆಂಗಳೂರು ಇವರನ್ನು ಸೇವೆಯಿಂದ ಡಿಸ್‌ಚಾರ್ಜ್

ಮಾಡಿದ ದಿನಾಂಕ : 28–02–2009 ರಿಂದ ಪುನರ್ ನೇಮಕ ಮಾಡಿಕೊಂಡ ಪೂರ್ವ ದಿನಾಂಕ : 21–11–2013ರವರೆಗಿನ ಅವಧಿಯನ್ನು ಕರ್ತವ್ಯದ ಅವಧಿ ಎಂದು ಪರಿಗಣಿಸಿ ತತ್ಪರಿಣಾಮವಾಗಿ ಲಭ್ಯವಾಗುವ ಎಲ್ಲಾ ಸೌಲಭ್ಯಗಳನ್ನು ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ದೇವೆಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಎ).

**PR. 335**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ** : 2013–14ನೇ ಸಾಲಿಗೆ ರಾಜ್ಯದಲ್ಲಿರುವ ವಿವಿಧ ನ್ಯಾಯವಾದಿಗಳ ಸಂಘಗಳಿಗೆ ಸಹಾಯಾನುದಾನ ಬಿಡುಗಡೆ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಲಾ 32 ಎಲ್‌ಸಿಎಲ್ 1982 ದಿನಾಂಕ: 17/18–03–1983 ಮತ್ತು ತಿದ್ದುಪಡಿ ದಿನಾಂಕ: 30–10–1996ರ ಅಧಿಸೂಚನೆ ಸಂಖ್ಯೆ: ಲಾ 112 ಎಲ್‌ಸಿಎಲ್ 1996.
2. ನಿಯಮಗಳ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ಲಾ 120 ಎಲ್‌ಸಿಎಲ್ 2007, ದಿನಾಂಕ:18–02–2008 ಮತ್ತು ಸೇರ್ಪಡೆ ದಿನಾಂಕ: 16–05–2008.
3. ದಿನಾಂಕ:07–01–2014, 01–02–2014 ಮತ್ತು ದಿನಾಂಕ: 03–03–2014ರ ಸರ್ಕಾರಿ ಆದೇಶ ಸಂಖ್ಯೆ: ಲಾ 104 ಎಲ್‌ಸಿಎಲ್ 2013.
4. ಮೈಸೂರು ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿಯ ಪತ್ರ ಸಂಖ್ಯೆ: 2402/2014 ದಿನಾಂಕ: 15–02–2014.
5. ಹಾಸನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿಯ ಪತ್ರ ಸಂಖ್ಯೆ: 1091/2014 ದಿನಾಂಕ: 28–02–2014.
6. ಉತ್ತರ ಕನ್ನಡ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿಯ ಪತ್ರ ಸಂಖ್ಯೆ: 1064/2014 ದಿನಾಂಕ: 07–03–2014.
7. ಮಂಡ್ಯ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿಯ ಪತ್ರ ಸಂಖ್ಯೆ: ಎಡಿಎಂಎನ್ 5561/2013 ದಿನಾಂಕ:07–11–2013.

**ಪ್ರಸ್ತಾವನೆ:**

ರಾಜ್ಯದಲ್ಲಿರುವ ವಿವಿಧ ವಕೀಲರುಗಳ ಸಂಘಗಳಿಗೆ ಕಾನೂನು ಪುಸ್ತಕ ಮತ್ತು ಪೀಠೋಪಕರಣಗಳನ್ನು ಖರೀದಿಸಲು ದಿ ಕರ್ನಾಟಕ ಗ್ರಾಂಟ್–ಇನ್–ಎಡ್–ಟು–ಬಾರ್ ಅಸೋಸಿಯೇಷನ್ ರೂಲ್ಸ್ 1983ನ್ನು ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ: 17/18–03–1983ರಲ್ಲಿ ರಚಿಸಲಾಗಿದೆ ಮತ್ತು ಇದಕ್ಕೆ ಹಂತ ಹಂತವಾಗಿ ತಿದ್ದುಪಡಿ ತರಲಾಗಿದ್ದು ದಿನಾಂಕ: 30–10–1996ರ ಅಧಿಸೂಚನೆಯಲ್ಲಿ ಆಯಾ ಜಿಲ್ಲೆಯ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರಿಗೆ ಅಧಿಕಾರ ಪ್ರತ್ಯಾಯೋಜಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಅಧಿಸೂಚನೆ ದಿನಾಂಕ: 18–02–2008 ಮತ್ತು ಸೇರ್ಪಡೆ ದಿನಾಂಕ: 16–05–2008ರನ್ವಯ ಸಹಾಯಾನುದಾನದ ಮೊತ್ತವನ್ನು ಹೆಚ್ಚಿಸಿದ ಕರ್ನಾಟಕ ವಕೀಲರ ಸಂಘಗಳಿಗೆ ಸಹಾಯಾನುದಾನ (ತಿದ್ದುಪಡಿ) ನಿಯಮಗಳು 2007 ದಿನಾಂಕ: 18–02–2008ರಿಂದ ಜಾರಿಗೆ ಬಂದಿದೆ.

ದಿನಾಂಕ: 07–01–2014, 01–02–2014 ಮತ್ತು 03–03–2014ರ ಆದೇಶದಲ್ಲಿ ಮೊದಲನೇ ಎರಡನೇ ಮತ್ತು ಮೂರನೇ ಹಂತವಾಗಿ 10.45 ಲಕ್ಷ ರೂ.15.95 ಲಕ್ಷ ರೂ. ಮತ್ತು 3.30 ಲಕ್ಷ ರೂಗಳನ್ನು 23 ಜಿಲ್ಲೆಗಳಿಗೆ ಮೇಲೆ ಓದಲಾದ (3)ರ ಆದೇಶದಲ್ಲಿ ಬಿಡುಗಡೆ ಮಾಡಲಾಗಿದೆ.

ನಾಲ್ಕನೇ ಹಂತದಲ್ಲಿ 04 ಜಿಲ್ಲೆಗಳ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಜಿಲ್ಲೆಯ ಹಾಗೂ ಅವರ ಅಧಿಕಾರ ವ್ಯಾಪ್ತಿಯಲ್ಲಿ ಬರುವ ತಾಲ್ಲೂಕು ಸಂಘಗಳ ಪ್ರಸ್ತಾವನೆ ಹಾಗೂ 2011–12ರ ಹಣ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸಿರುತ್ತಾರೆ. ಅದನ್ನು ಪರಿಶೀಲಿಸಿ ನಿಗಧಿಯಾಗಿರುವ ರೂ. 56.00 ಲಕ್ಷಗಳಲ್ಲಿ ಸದರಿ ಜಿಲ್ಲೆ ಹಾಗೂ ತಾಲ್ಲೂಕು ವಕೀಲರ ಸಂಘಗಳಿಗೆ ಹಂಚಿಕೆ ಮಾಡಲು ಸರ್ಕಾರವು ನಿರ್ಧರಿಸಿದೆ. ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 104 ಎಲ್ ಸಿ ಎಲ್ 2013 ಬೆಂಗಳೂರು ದಿನಾಂಕ: 15–03–2014**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ರಾಜ್ಯದಲ್ಲಿನ ವಕೀಲರ ಸಂಘಗಳಿಗೆ ಸಹಾಯಾನುದಾನ ನಿಯಮಗಳು 1983 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಅನುದಾನ ಕೋರಿ ಪ್ರಸ್ತಾವನೆ ಸಲ್ಲಿಸಿರುವ ಈ ಕೆಳಕಂಡ ವಕೀಲರ ಸಂಘಗಳಿಗೆ ರೂ. 7.55 ಲಕ್ಷ (ಏಳು ಲಕ್ಷದ ಐವತ್ತೈದು ಸಾವಿರ ರೂಪಾಯಿಗಳು ಮಾತ್ರ) ಸಹಾಯಾನುದಾನವನ್ನು 2013–14ನೇ ಸಾಲಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಬಾರ್ ಅಸೋಸಿಯೇಷನ್ ಹೆಸರು | ಬಿಡುಗಡೆ ಮಾಡಬಹುದಾದ ಮೊತ್ತ |
|---|---|
| 1) ವಕೀಲರ ಸಂಘ, ಮೈಸೂರು ಜಿಲ್ಲೆ | ರೂ. 1,70,000/– |
| 2) ವಕೀಲರ ಸಂಘ, ಹಾಸನ ಜಿಲ್ಲೆ | ರೂ. 1,75,000/ |
| 3) ವಕೀಲರ ಸಂಘ, ಉತ್ತರ ಕನ್ನಡ ಜಿಲ್ಲೆ | ರೂ. 2,55,000/ |
| 4) ವಕೀಲರ ಸಂಘ, ಮಂಡ್ಯ ಜಿಲ್ಲೆ | ರೂ. 1,55,000/ |
| **ಒಟ್ಟು** | **ರೂ. 7,55,000/** |

ಎಲ್ಲಾ ವಿಭಾಗೀಯ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ವಕೀಲರ ಸಂಘಗಳಿಗೆ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಗಳು ಅಂದರೆ ಆಯಾ ಜಿಲ್ಲೆಯ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು / ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರುಗಳು ಈ ಆದೇಶದಲ್ಲಿ ಬಿಡುಗಡೆ ಮಾಡಲಾದ ಸಹಾಯಾನುದಾನವನ್ನು ಆಯಾ ವಕೀಲರ ಸಂಘಗಳಿಂದ ವರದಿಯೊಂದಿಗೆ ಅರ್ಜಿಗಳನ್ನು ಪಡೆದು ಪರಿಶೀಲಿಸಿ ಈ ಕೆಳಗೆ ನಿಗಧಿಪಡಿಸಲಾಗಿರುವಂತೆ

| | | |
|---|---|---|
| ತಾಲ್ಲೂಕು ಮಟ್ಟದ ವಕೀಲರ ಸಂಘ | – | ರೂ.20,000 |
| ಜಿಲ್ಲಾ ಮಟ್ಟದ ವಕೀಲರ ಸಂಘ | – | ರೂ.35,000 |
| ಬೆಂಗಳೂರು ವಕೀಲರ ಸಂಘ | – | ರೂ.1.25,000 |

ಮಂಜೂರು ಮಾಡಬಹುದು ಮತ್ತು ಆರ್ಥಿಕ ಇಲಾಖೆಯು ಆಗಿಂದಾಗ್ಗೆ ಹೊರಡಿಸಿರುವ ಮಾರ್ಗಸೂಚಿಗಳ ಅನ್ವಯ ನಿಗಧಿತ ಕಾಲಮಿತಿಯೊಳಗೆ ಸಂಬಂಧಪಟ್ಟ ಖಜಾನೆಗಳಿಗೆ ಬಿಲ್‌ಗಳನ್ನು ಸಲ್ಲಿಸಿ ಹಣ ಪಡೆಯತಕ್ಕದ್ದು.

ಪ್ರಮಾಣ ಪತ್ರವನ್ನು ಸಲ್ಲಿಸದೇ ಇರುವ ವಕೀಲರುಗಳ ಸಂಘಗಳಿಂದ ಉಪಯೋಗಿತ ಪ್ರಮಾಣ ಪತ್ರ ಪಡೆದು, ಪ್ರಸಕ್ತ ಸಾಲಿನ ಸಹಾಯಾನುದಾನ ಬಿಡುಗಡೆ ಮಾಡುವ ಷರತ್ತಿಗೆ ಈ ಆದೇಶ ಒಳಪಟ್ಟಿದೆ.

ಪ್ರಸಕ್ತ ಆರ್ಥಿಕ ವರ್ಷದ ನಂತರ ಆ ಸಾಲಿನ ಅನುದಾನ ಬಿಡುಗಡೆಗಾಗಿ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗದು. ಆರ್ಥಿಕ ವರ್ಷ ಮುಗಿದ ಕೂಡಲೇ ಈ ಉದ್ದೇಶಕ್ಕಾಗಿ ಸಕ್ಷಮ ಪ್ರಾಧಿಕಾರಿಗಳು ಬಿಡುಗಡೆ ಮಾಡಿದ ಮತ್ತು ಆದ್ಯರ್ಪಣೆ ಮಾಡಿದ ವಿವರಗಳನ್ನು ಸರ್ಕಾರಕ್ಕೆ ತಪ್ಪದೇ ಸಲ್ಲಿಸುವುದು.

ಈ ಸಹಾಯಾನುದಾನವನ್ನು ಅಡ್ವೊಕೇಟ್ ಜನರಲ್‌ರವರ ಮೂಲಕ ಲೆಕ್ಕಶೀರ್ಷಿಕೆ 2014–00–114–0–01–059 ಇತರೆ ಖರ್ಚು (ಯೋಜನೇತರ) ಅಡಿಯಲ್ಲಿ ಒದಗಿಸಿರುವ 2013–14ನೇ ಸಾಲಿನ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಕಾನೂನು ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ವನ ಇ 169 ಆಂಆಬಿ 2014 ದಿನಾಂಕ: 15–02–2014ರಲ್ಲಿ ನೀಡಲಾಗಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

**ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,**
**ಹೆಚ್.ಎಸ್.ಜಯರಾಮು,**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**P.R. 348**
**S.C. 25**

## ಶಿಕ್ಷಣ ಸಚಿವಾಲಯ

**ವಿಷಯ** : ಕರ್ನಾಟಕ ರಾಜ್ಯ ವಿದ್ಯಾರ್ಥಿಗಳ ಕ್ಷೇಮಾಭಿವೃದ್ಧಿ ನಿಧಿ, ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ ಹಾಗೂ ರಾಷ್ಟ್ರೀಯ ಶಿಕ್ಷಕರ ಕಲ್ಯಾಣ ಪ್ರತಿಷ್ಠಾನ ಈ ಮೂರು ನಿಧಿಗಳಿಗೆ ಅನ್ವಯಿಸುವಂತೆ ಏಕರೂಪ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಇಡಿ 41 ಎಸ್‌ಓಹೆಚ್ 2010 ದಿನಾಂಕ: 06–03–2010.
2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಮತ್ತು ಕಾರ್ಯದರ್ಶಿ/ ಖಜಾಂಚಿಗಳು, ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ ಇವರ ಪತ್ರ ಸಂಖ್ಯೆ: ಎಫ್ 1/ಶಿಕನಿ/ಆಡಳಿತ/ರಾಜ್ಯ ಸಮಿತಿ/39/2006–07, ದಿನಾಂಕ: 20–06–2013 ಮತ್ತು 11–10–2013.

**ಪ್ರಸ್ತಾವನೆ :–**

1] ಮೇಲೆ [01]ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಎರಡು ವರ್ಷಗಳ ಅವಧಿಗೆ ಕರ್ನಾಟಕ ರಾಜ್ಯ ವಿದ್ಯಾರ್ಥಿಗಳ ಕ್ಷೇಮಾಭಿವೃದ್ಧಿ ನಿಧಿ, ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ ಹಾಗೂ ರಾಷ್ಟ್ರೀಯ ಶಿಕ್ಷಕರ ಕಲ್ಯಾಣ ಪ್ರತಿಷ್ಠಾನ ಈ ಮೂರು ನಿಧಿಗಳಿಗೆ 09 ಜನ ಅಧಿಕಾರಯುಕ್ತ ಮತ್ತು 03 ಜನ ಅಧಿಕೇತರರನ್ನೊಳಗೊಂಡ ಸಮಿತಿಯನ್ನು ರಚಿಸಲಾಗಿದೆ. ಈ ಸಮಿತಿಯ ಕಾಲಾವಧಿಯು ದಿನಾಂಕ: 05–03–2012ಕ್ಕೆ ಮುಗಿದಿರುತ್ತದೆ.

ಮೇಲೆ [02]ರಲ್ಲಿ ಓದಲಾದ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಮತ್ತು ಕಾರ್ಯದರ್ಶಿ/ಖಜಾಂಚಿಗಳು, ಇವರು ಕರ್ನಾಟಕ ರಾಜ್ಯ ವಿದ್ಯಾರ್ಥಿಗಳ ಕ್ಷೇಮಾಭಿವೃದ್ಧಿ ನಿಧಿ, ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ ಹಾಗೂ ರಾಷ್ಟ್ರೀಯ ಶಿಕ್ಷಕರ ಕಲ್ಯಾಣ ಪ್ರತಿಷ್ಠಾನ ಈ ಮೂರು ನಿಧಿಗಳಿಗೆ ಅನ್ವಯಿಸುವಂತೆ ಏಕರೂಪ ಸಮಿತಿಯನ್ನು ರಚಿಸುವ ಬಗ್ಗೆ ಹಾಗೂ ಶ್ರೀ ಎನ್.ನಂಜಪ್ಪ ಗೌಡರು ಶ್ರೀರಂಗಪಟ್ಟಣ ಇವರ ಸೇವೆಯನ್ನು ಗುರುತಿಸಿ, ಇವರನ್ನು ಈ ನಿಧಿಗಳ ಸರ್ಕಾರೇತರ ಮೂವರು ಸದಸ್ಯರಲ್ಲಿ ಒಬ್ಬ ಸದಸ್ಯರನ್ನಾಗಿ ನೇಮಿಸುವಂತೆ ಶಿಫಾರಸ್ಸು ಮಾಡಿದ್ದಾರೆ ಹಾಗೂ ಉಳಿದ ಇಬ್ಬರು ಸದಸ್ಯರ ಸ್ಥಳದಲ್ಲಿ ಹೊಸದಾಗಿ ಶಿಕ್ಷಣ ತಜ್ಞರನ್ನು ಸಮಿತಿಗೆ ಸರ್ಕಾರೇತರ ಸದಸ್ಯರನ್ನಾಗಿ ನೇಮಕ ಮಾಡಿ ಏಕರೂಪ ಸಮಿತಿಯನ್ನು ಪುನರ್ ರಚಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

2] ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 375 ಎಸ್‌ಓಹೆಚ್ 2013 ಬೆಂಗಳೂರು, ದಿನಾಂಕ: 18ನೇ ಡಿಸೆಂಬರ್ 2013.**

3] ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ, ಕರ್ನಾಟಕ ರಾಜ್ಯ ವಿದ್ಯಾರ್ಥಿಗಳ ಕ್ಷೇಮಾಭಿವೃದ್ಧಿ ನಿಧಿ, ಮತ್ತು ರಾಷ್ಟ್ರೀಯ ಶಿಕ್ಷಕರ ಕಲ್ಯಾಣ ಪ್ರತಿಷ್ಠಾನ ಈ ಮೂರು ನಿಧಿಗಳ ಆಡಳಿತ ನಿರ್ವಹಣೆಗಾಗಿ ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ 02 ವರ್ಷಗಳ ಅವಧಿಗೆ ಈ ಕೆಳಕಂಡ 09 ಅಧಿಕಾರಯುಕ್ತ ಸದಸ್ಯರು ಹಾಗೂ 03 ಅಧಿಕಾರೇತರ ಸದಸ್ಯರನ್ನೊಳಗೊಂಡ, ಏಕರೂಪ ಸಮಿತಿಯನ್ನು ಪುನರ್‌ರಚಿಸಲಾಗಿದೆ. ವಿವರ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ಹೆಸರು/ಪದನಾಮ/ವಿಳಾಸ | ಹುದ್ದೆ |
|---|---|---|
| 1 | ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು, ಕರ್ನಾಟಕ ಸರ್ಕಾರ, ಬೆಂಗಳೂರು. | ಅಧ್ಯಕ್ಷರು |
| 2 | ಪ್ರಧಾನ ಕಾರ್ಯದರ್ಶಿಗಳು, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ, ಕರ್ನಾಟಕ ಸರ್ಕಾರ, ಬೆಂಗಳೂರು. | ಸದಸ್ಯರು |
| 3 | ಪ್ರಧಾನ ಕಾರ್ಯದರ್ಶಿಗಳು, ಉನ್ನತ ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು. | ಸದಸ್ಯರು |
| 4 | ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು. | ಕಾರ್ಯದರ್ಶಿ/ಖಜಾಂಚಿಗಳು |
| 5 | ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು. | ಸದಸ್ಯರು |
| 6 | ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇಲಾಖೆ, ಬೆಂಗಳೂರು. | ಸದಸ್ಯರು |
| 7 | ನಿರ್ದೇಶಕರು/ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ. | ಸದಸ್ಯರು |
| 8 | ಅಧ್ಯಕ್ಷರು, ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ, ಬೆಂಗಳೂರು. | ಸದಸ್ಯರು |
| 9 | ಅಧ್ಯಕ್ಷರು, ಕರ್ನಾಟಕ ರಾಜ್ಯ ಪ್ರೌಢ ಶಾಲಾ ಮುಖ್ಯೋಪಾಧ್ಯಾಯರ ಮತ್ತು ಸಂಯುಕ್ತ ಪದವಿ ಪೂರ್ವ ಕಾಲೇಜುಗಳ ಪ್ರಾಚಾರ್ಯರ ಸಂಘ, ಬೆಂಗಳೂರು. | ಸದಸ್ಯರು |

| ಸರ್ಕಾರೇತರ ಸದಸ್ಯರು | | |
|---|---|---|
| 1 | ಶ್ರೀ ಎನ್.ನಂಜಪ್ಪಗೌಡರು, ಶ್ರೀರಂಗಪಟ್ಟಣ ಕ್ಷೇತ್ರ, ಮಂಡ್ಯ ಜಿಲ್ಲೆ. | ಅಧ್ಯಕ್ಷರು |
| 2 | ಶ್ರೀ ಕುಮಾರಸ್ವಾಮಿ, ನಿವೃತ್ತ ಸಹ ನಿರ್ದೇಶಕರು. | ಸದಸ್ಯರು |
| 3 | ಶ್ರೀ ಸಣ್ಣನಾಯ್ಕ, ನಿವೃತ್ತ ಅಧಿಕಾರಿ ಹಾಗೂ ವಕೀಲರು. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಗಣೇಶ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ [ಪ್ರೌಢ ಶಿಕ್ಷಣ].

P.R. 349
S.C. 200

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** 1. ಭಾರತ ಸರ್ಕಾರದ ಸಿಬ್ಬಂದಿ ಮತ್ತು ತರಬೇತಿ ಇಲಾಖೆಯ ಅಧಿಸೂಚನೆ ಸಂಖ್ಯೆ: 11031/2/2013–ಎಐಎಸ್–II, ದಿನಾಂಕ: 22–01–2014.

2. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 04 ಸೇಅಸೆ 2014, ದಿನಾಂಕ: 03–02–2014.

3. ಆರ್ಥಿಕ ಇಲಾಖೆಯ ದಿನಾಂಕ: 06–02–2014ರ ಟಿಪ್ಪಣೆ ಸಂಖ್ಯೆ: ಆಇ 149 ವೆಚ್ಚ–12/2014.

**ಪ್ರಸ್ತಾವನೆ :**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ, ದಿನಾಂಕ: 22–01–2014ರ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವೃಂದದ ಐ.ಎ.ಎಸ್. ವೃಂದ ಪರಿಷ್ಕರಣೆ ಪ್ರಸ್ತಾವನೆಯ ಮೇರೆಗೆ, ಭಾರತ ಸರ್ಕಾರದ ಸಿಬ್ಬಂದಿ ಮತ್ತು ತರಬೇತಿ ಇಲಾಖೆಯು ಇತರೆ ವೇತನ ಶ್ರೇಣಿಯ ಹುದ್ದೆಗಳೊಂದಿಗೆ ಐ.ಎ.ಎಸ್. ಶೃಂಗ ಶ್ರೇಣಿ ವೃಂದದ ಹುದ್ದೆಗಳನ್ನು 04 ರಿಂದ 08ಕ್ಕೆ ಹೆಚ್ಚಿಸಲಾಗಿದೆ. ಹೀಗೆ ಹೆಚ್ಚಿಸಲಾದ 04 ಹುದ್ದೆಗಳಲ್ಲಿ ಆರ್ಥಿಕ ಇಲಾಖೆಯ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹುದ್ದೆಯು ಒಳಗೊಂಡಿರುತ್ತದೆ. ಈ ಹಿನ್ನೆಲೆಯಲ್ಲಿ ಆರ್ಥಿಕ ಇಲಾಖೆಯ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹುದ್ದೆಯನ್ನು ಭರ್ತಿ ಮಾಡುವುದು ಅವಶ್ಯಕವಾದ್ದರಿಂದ, ಮೇಲೆ (2)ರಲ್ಲಿ ಓದಲಾದ ದಿನಾಂಕ; 03–02–2014ರ ಅಧಿಸೂಚನೆಯಲ್ಲಿ ಐ.ಎ.ಎಸ್. ಶೃಂಗ ಶ್ರೇಣಿ ಅಧಿಕಾರಿಯಾದ ಶ್ರೀ ಎಲ್.ವಿ.ನಾಗರಾಜನ್, ಭಾ.ಆ.ಸೇ., ಇವರನ್ನು ಅಧ್ಯಕ್ಷರು, ಕರ್ನಾಟಕ ನಗರ ಮೂಲ ಸೌಲಭ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆ ಹುದ್ದೆಯಿಂದ ವರ್ಗಾಯಿಸಿ, ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಆರ್ಥಿಕ ಇಲಾಖೆ ಹುದ್ದೆಗೆ ನೇಮಿಸಲಾಗಿದೆ.

ಮುಂದುವರೆದು, ಪ್ರಸ್ತುತ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಐ.ಎಸ್.ಎನ್. ಪ್ರಸಾದ್, ಐ.ಎ.ಎಸ್, ಇವರನ್ನೂ ಸಹ ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ದಿನಾಂಕ: 03–02–2014ರ ಅಧಿಸೂಚನೆಯಲ್ಲಿ ಹೊಸದಾಗಿ ಸೃಜಿಸಲಾಗಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ ಹುದ್ದೆಯಲ್ಲಿ ಮುಂದುವರಿಸಲಾಗಿರುವುದರಿಂದ ಸದರಿ ಹುದ್ದೆಯನ್ನು

ಸೃಜಿಸುವ ಅವಶ್ಯಕವಿರುತ್ತದೆ. ಈ ಹಿನ್ನೆಲೆಯಲ್ಲಿ ಆರ್ಥಿಕ ಇಲಾಖೆಯಲ್ಲಿ ಹೆಚ್.ಎ.ಜಿ. ವೃಂದದಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸಲು ಆರ್ಥಿಕ ಇಲಾಖೆಯ ಸಹಮತಿ ಕೋರಲಾಗಿತ್ತು. ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ಸದರಿ ಪ್ರಸ್ತಾವನೆಗೆ ಸಹಮತಿ ನೀಡಿರುತ್ತದೆ.

ಈ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 88 ಸೆಅಸೆ 2014, ಬೆಂಗಳೂರು, ದಿನಾಂಕ: 14ನೇ ಫೆಬ್ರವರಿ, 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಆರ್ಥಿಕ ಇಲಾಖೆಯಲ್ಲಿ ಒಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 03–02–2014ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೃಜಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 149 ವೆಚ್ಚ–12/2014, ದಿನಾಂಕ 6–2–2014ರಲ್ಲಿನ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಹೆಚ್.ನಾರಾಯಣಸ್ವಾಮಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು.ಇ.(ಸೇವೆಗಳು–1).

**P.R. 350**

## PERSONNEL AND ADMINISTRATIVE REFORMS SECRETARIAT

## PROCEEDINGS OF THE GOVERNMENT OF KARNATAKA

**SUB:** Constitution of Civil Services Boards for IAS, IPS, IFS, KAS officers and Chief Engineers, Heads of Department and Karnataka Government Secretariat officers of the rank of Under Secretary and above in terms of the Judgement dated: 31-10-2013 of the Hon`ble Supreme Court of India in WP (Civil) No.82/2011 and 234/2011 filed by Shri. T.S.R.Subramanian, former Cabinet Secretary, Government of India and others – reg.

**READ :**

1) The Judgement dated 31-10-2013 of the Hon`ble Supreme Court of India in WP (Civil) No. 82/2011 and 234/2011.
2) The Government of India, Department of Personnel & Training Notification dated: 28-01-2014 regarding publication of the Indian Administrative Service (Cadre) Amendment Rules, 2014.
3) The Government of India, Department of Personnel & Training Notification dated: 28-01-2014 regarding publication of the Indian Police Service (Cadre) Amendment Rules, 2014.
4) The Government of India, Department of Personnel & Training Notification dated: 28-01-2014 regarding publication of the Indian Forest Service (Cadre) Amendment Rules, 2014.
5) State Government Order No.DPAR 976 SAS 2013, dated: 31-12-2013.

**PREAMBLE:**

In Government Order of even number dated 31-12-2013 read at (5) above, Civil Services Boards in respect of IAS, IPS, IFS and KAS and other cadres have been constituted and tenure policy in respect of all services except IPS cadre was notified. It was stated in the Government Order that the minimum tenure policy in respect of IPS cadre will be notified separately.

Accordingly, the State Government have examined the issue of notifying the tenure policy in respect of IPS cadre and the following orders are issued.

**GOVERNMENT ORDER NO. DPAR 976 SAS 2013, BANGALORE, DATED 17TH FEBRUARY, 2014.**

In constinuation of Government Order dated 31-12-2013, under **Tenure Policy,** the following shall be inserted under **Sl.No. (2) Indian Police Service:-**

*"The minium tenure policy of two years as prescribed in sub-rule (3) of Rule 2 of the Indian Police Service (Cadre) Amendment Rules, 2014 shall be applicable to all Indian Police Service officers appointed to all cadre posts. The minimum tenure policy of two years shall be applicable to IPS officers appointed to all ex-cadre posts of IPS also. The other conditions prescribed in the IPS (Cadre) Amendment Rules, 2014 shall be applicable for enforcing the minimum tenure policy".*

By Order and in the name of the Governor of Karnataka,
**U.H.NARAYANASWAMY,**
Under Secretary to Government,
DPAR (Services-I).

**P.R. 351**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ದಿ. ಶ್ರೀ ಎಂ.ಆರ್.ಮಹೇಶ್‌ಕುಮಾರ್, ಉಪ ಕಾರ್ಯದರ್ಶಿ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರಿಗೆ ಪ್ರಭಾರ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1. ಅಧಿಸೂಚನೆ ಸಂಖ್ಯೆ: ಆಇ/32/ಸಮಯ/2013, ದಿನಾಂಕ: 21-05-2013.

2. ಪ್ರಭಾರ ಭತ್ಯೆ ಅರ್ಜಿ ನಮೂನೆ ದಿನಾಂಕ: 01-10-2013.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯನ್ವಯ ಶ್ರೀಮತಿ ಭವಾನಿ ದೇವಿ, ಆಂತರಿಕ ಆರ್ಥಿಕ ಸಲಹೆಗಾರರು, ಒಳಾಡಳಿತ ಮತ್ತು ಸಾರಿಗೆ ಇಲಾಖೆ, ಇವರು ದಿನಾಂಕ: 31-04-2013ರಂದು ವಯೋನಿವೃತ್ತಿ ಹೊಂದಿರುವುದರಿಂದ ತೆರವಾದ ಹುದ್ದೆಯಲ್ಲಿ ದಿ. ಶ್ರೀ ಎಂ.ಆರ್.ಮಹೇಶ್‌ಕುಮಾರ್, ಆಂತರಿಕ ಆರ್ಥಿಕ ಸಲಹೆಗಾರರು, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ, ಇವರನ್ನು ನಿಧನ ಪೂರ್ವದಲ್ಲಿ ಹೆಚ್ಚಿನ ಪ್ರಭಾರದಲ್ಲಿರಿಸಲಾಗಿತ್ತು. ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಅರ್ಜಿಯಲ್ಲಿ ದಿ. ಶ್ರೀ ಎಂ.ಆರ್.ಮಹೇಶ್‌ಕುಮಾರ್ ಇವರ ಪತ್ನಿಯಾದ ಶ್ರೀಮತಿ ಶೋಭಾ ಎಂ. ಕುಮಾರ್, ಅವರು ತಮ್ಮ ಪತಿಯವರು ದಿನಾಂಕ: 23-05-2013 ರಿಂದ ದಿನಾಂಕ: 03-08-2013ರವರೆಗೆ ಆಂತರಿಕ ಆರ್ಥಿಕ ಸಲಹೆಗಾರರು, ಒಳಾಡಳಿತ ಮತ್ತು ಸಾರಿಗೆ ಇಲಾಖೆ, ಹುದ್ದೆಯಲ್ಲಿ ಹೆಚ್ಚುವರಿ ಪ್ರಭಾರದಲ್ಲಿ ಕಾರ್ಯನಿರ್ವಹಿಸಿರುವ ಅವಧಿಗೆ ಪ್ರಭಾರ ಭತ್ಯೆಯನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 11 ಸಲುಸೇ 2014 ಬೆಂಗಳೂರು, ದಿನಾಂಕ: 10ನೇ ಮಾರ್ಚ್, 2014.**

ದಿ. ಶ್ರೀ ಎಂ.ಆರ್.ಮಹೇಶ್‌ಕುಮಾರ್, ಸರ್ಕಾರದ ಉಪ ಕಾರ್ಯದರ್ಶಿ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರು, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ, ಇವರು ಆಂತರಿಕ ಆರ್ಥಿಕ ಸಲಹೆಗಾರರು, ಒಳಾಡಳಿತ ಮತ್ತು ಸಾರಿಗೆ ಇಲಾಖೆ, ಹುದ್ದೆಯಲ್ಲಿ ದಿನಾಂಕ: 23-05-2013 ರಿಂದ 03-08-2013ರವರೆಗೆ ಅಧಿಕ ಪ್ರಭಾರದಲ್ಲಿ ಕಾರ್ಯ ನಿರ್ವಹಿಸಿರುವುದಕ್ಕಾಗಿ, ಸರ್ಕಾರದ ಉಪ ಕಾರ್ಯದರ್ಶಿ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರು ವೃಂದದ ವೇತನ ಶ್ರೇಣಿ ರೂ. 40050-56550ರ ಕನಿಷ್ಠ ವೇತನದ ಶೇಕಡ 7.5ರಷ್ಟು ಪ್ರಭಾರ ಭತ್ಯೆಯನ್ನು ಸದರಿ ಅಧಿಕಾರಿಯವರ ಪತ್ನಿಯಾದ ಶ್ರೀಮತಿ ಶೋಭಾ ಎಂ. ಕುಮಾರ್ ಇವರಿಗೆ ಸರ್ಕಾರದ ಆದೇಶ ಸಂಖ್ಯೆ: ಆಇ 3 ಸೇನಿಸೇ 2012; ದಿನಾಂಕ:14-06-2012 ಮತ್ತು ಕರ್ನಾಟಕ ನಾಗರೀಕ ಸೇವಾ ನಿಯಮ 68ರ ಅನ್ವಯ ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಂದ್ರಶೇಖರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ(ಸೇವೆಗಳು-6).

**P.R. 352**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ** : 2013-14ನೇ ಸಾಲಿನಲ್ಲಿ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ರೈತರಿಂದ ಭತ್ತವನ್ನು ಖರೀದಿಸುವ ಬಗ್ಗೆ.

**ಓದಲಾಗಿದೆ :** 1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : 4(1) 2013-ಪಿ.ವೈ.1, ದಿನಾಂಕ : 11-07-2013.

2. ಸರ್ಕಾರದ ಆದೇಶ ಸಂಖ್ಯೆ : ಆನಾಸ 13 ಆರ್‌ಪಿಆರ್ 2013, ದಿನಾಂಕ : 13-11-2013.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಕೇಂದ್ರ ಸರ್ಕಾರದ ಪತ್ರ ಸಂ. 4(1) 2013-ಪಿವೈ.1, ದಿನಾಂಕ : 11-07-2013ರಲ್ಲಿ ಕನಿಷ್ಟ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ರೈತರಿಂದ ಖರೀದಿಸುವ ಭತ್ತಕ್ಕೆ ಈ ಕೆಳಕಂಡ ದರವನ್ನು ನಿಗಧಿಪಡಿಸಿದೆ :-

| ಆಹಾರ ಪದಾರ್ಥ | ಶ್ರೇಣಿ | 2013-14ರ ಕನಿಷ್ಠ ಬೆಂಬಲ ಬೆಲೆ ದರ (ಪ್ರತಿ ಕ್ವಿಂಟಾಲ್‌ಗೆ) |
|---|---|---|
| ಭತ್ತ | ಸಾಮಾನ್ಯ | ರೂ. 1310/- |
| | ಶ್ರೇಣಿ-ಎ | ರೂ. 1345/- |

ರಾಜ್ಯ ಸರ್ಕಾರವು ರೈತರಿಗೆ ಆರ್ಥಿಕವಾಗಿ ನೆರವು ನೀಡುವ ಹಿನ್ನೆಲೆಯಲ್ಲಿ ಸಾಮಾನ್ಯ ಭತ್ತಕ್ಕೆ ಪ್ರತಿ ಕ್ವಿಂಟಾಲ್‌ಗೆ ರೂ. 290/-ರ ಪ್ರೋತ್ಸಾಹ ಧನವನ್ನಾಗಿ ಮಂಜೂರು ಮಾಡಲು ತೀರ್ಮಾನಿಸಲಾಗಿದೆ.

ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ರೈತರಿಂದ ಖರೀದಿಸುವ ಭತ್ತಕ್ಕೆ ಸಂಗ್ರಹಣಾ ಏಜನ್ಸಿಗಳನ್ನು ನೇಮಕ ಮಾಡಲಾಗಿದ್ದು, ಭತ್ತ ಖರೀದಿ ಪ್ರಕ್ರಿಯೆಗೆ ನಿಗಧಿಪಡಿಸುವ ದರ ಹಾಗೂ ಮಾರ್ಗಸೂಚಿಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದೆಂದು ತಿಳಿಸಿದ್ದು, ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆನಾಸ 29 ಆರ್‌ಪಿಆರ್ 2013, ಬೆಂಗಳೂರು, ದಿನಾಂಕ : 19-11-2013.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, 2013-14ನೇ ಸಾಲಿನ ರೈತರಿಂದ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಖರೀದಿಸಲು ಸಾಮಾನ್ಯ ಭತ್ತಕ್ಕೆ ಕೇಂದ್ರ ಸರ್ಕಾರವು ನಿಗಧಿಪಡಿಸಿರುವ ದರ ಪ್ರತಿ ಕ್ವಿಂಟಾಲ್‌ಗೆ ರೂ. 1310/-ರ ಜೊತೆಗೆ ರಾಜ್ಯ ಸರ್ಕಾರದ ಪ್ರೋತ್ಸಾಹ ಧನ ಪ್ರತಿ ಕ್ವಿಂಟಾಲ್‌ಗೆ ರೂ. 290/-ನ್ನು ಸೇರಿಸಿ ರೂ. 1,600/- ದರದಲ್ಲಿ ಖರೀದಿಸಲು ;

2. ಜಿಲ್ಲೆಯ ಜಿಲ್ಲಾಧಿಕಾರಿಗಳು ತಕ್ಷಣವೇ ಸಮಿತಿ ಸಭೆಯನ್ನು ಕರೆದು ಭತ್ತ ಆವಕವಾಗುವ ಸ್ಥಳಗಳಲ್ಲಿ ಖರೀದಿ ಕೇಂದ್ರಗಳನ್ನು ತೆರೆಯಲು ಕ್ರಮ ವಹಿಸತಕ್ಕದ್ದು.

3. ಕೇಂದ್ರ ಸರ್ಕಾರವು ನಿಗಧಿಪಡಿಸಿದ ಗುಣಮಟ್ಟದಂತೆ ಕೃಷಿ ಇಲಾಖೆಯ ಗ್ರೇಡರ್‌ಗಳ ಮೂಲಕ ದೃಢೀಕರಿಸಿದ ನಂತರವೇ ಭತ್ತವನ್ನು ಖರೀದಿಸತಕ್ಕದ್ದು ;

4. ಜಿಲ್ಲಾಧಿಕಾರಿಗಳು ಖಾಲಿಯಿರುವ ಉಗ್ರಾಣಗಳನ್ನು ಗುರುತಿಸಿ, ಭತ್ತ ಖರೀದಿಗೆ ಬೇಕಾಗುವ ಸ್ಥಳವನ್ನು ಸಹ ಕಾಯ್ದಿರಿಸಿಕೊಳ್ಳತಕ್ಕದ್ದು.

5. ಭತ್ತದ ಖರೀದಿಯ ದಿನಾಂಕ : 31–02–2014 ಅಥವಾ ಮಾರುಕಟ್ಟೆ ದರ ಸ್ಥಿರತೆಗೊಳ್ಳುವವರೆವಿಗೂ ಯಾವುದು ಮೊದಲು ಅಲ್ಲಿಯವರೆಗೆ ನಿರ್ವಹಿಸತಕ್ಕದ್ದು ;

6. ಜಿಲ್ಲಾಧಿಕಾರಿಗಳು ಖರೀದಿ ಪ್ರಕ್ರಿಯೆಯನ್ನು ಸುಗಮವಾಗಿ ನಿರ್ವಹಿಸುವ ದೃಷ್ಟಿಯಿಂದ ಕೃಷಿ ಮಾರುಕಟ್ಟೆ/ತೋಟಗಾರಿಕೆ/ಪಶುಸಂಗೋಪನಾ ಇಲಾಖೆಯ ಹಾಗೂ ಇನ್ನಿತರ ಇಲಾಖೆಯ ಸಿಬ್ಬಂದಿಗಳ ಮೂಲಕ ತಂಡಗಳನ್ನು ರಚಿಸಿ ಕಾರ್ಯನಿರ್ವಹಿಸತಕ್ಕದ್ದು. ಈ ಪ್ರಕ್ರಿಯೆಯಲ್ಲಿ ಲೋಪದೋಷಗಳಿಗೆ ಎಡೆ ಮಾಡಿಕೊಡದಂತೆ ಕ್ರಮವಹಿಸುವುದು.

7. ರೈತರು ಭತ್ತವನ್ನು 50 ಕೆ.ಜಿ. ತೂಕದ ಚೀಲಗಳಲ್ಲಿ ತರುವಂತೆ ಸೂಕ್ತವಾಗಿ ಮಾರ್ಗದರ್ಶನ ನೀಡತಕ್ಕದ್ದು ;

8. ದಾಸ್ತಾನು ಮಾಡುವ ಮುನ್ನಾ ಕೇಂದ್ರ ಸರ್ಕಾರವು ನಿಗಧಿಪಡಿಸಿರುವ ಗುಣಮಟ್ಟವನ್ನು ಪರಿಶೀಲಿಸಿ ನಂತರವೇ ಅದನ್ನು ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದು ಹಾಗೂ ದಾಸ್ತಾನು ರಿಜಿಸ್ಟರ್‌ನ್ನು ಪ್ರತಿದಿನವು ಕ್ರಮಬದ್ಧವಾಗಿ ನಿರ್ವಹಿಸಲು ಕ್ರಮಕೈಗೊಳ್ಳುವುದು.

9. ಭತ್ತ ಖರೀದಿಗೆ ತಗಲುವ ಸಾಗಾಣಿಕೆ ವೆಚ್ಚವನ್ನು ಅದೇ ಜಿಲ್ಲೆಗೆ ನಿಗಧಿಪಡಿಸಿರುವ ಆಹಾರಧಾನ್ಯಗಳ ಸಾಗಾಣಿಕೆ ಟೆಂಡರ್ ದರದಲ್ಲಿ ಪಾವತಿಸಲು ;

10. ಭತ್ತದ ಖರೀದಿ ಪ್ರಕ್ರಿಯೆಗೆ ಅಗತ್ಯವಾಗುವ ಹಣವನ್ನು ಆವರ್ತ ನಿಧಿಯಿಂದ ಭರಿಸಲು.

11. ಖರೀದಿಸಿದ ಭತ್ತದ ಮೌಲ್ಯವನ್ನು RTGS ಮೂಲಕವೇ ಪಾವತಿ ಮಾಡಲು ಈ ಪ್ರಕ್ರಿಯೆಯಲ್ಲಿ ಮಧ್ಯವರ್ತಿಗಳು ಭಾಗವಹಿಸದಂತೆ ಕಟ್ಟುನಿಟ್ಟಿನ ಕ್ರಮ ತೆಗೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

PR. 285
SC-200

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ಕೇಂದ್ರ/ರಾಜ್ಯ ಪುರಸ್ಕೃತ ಯೋಜನೆ ಮೂಲಕ ಕನಿಷ್ಠ ಬೆಂಬಲ ಬೆಲೆ/ಲೆವಿ ಮೂಲಕ ಖರೀದಿಸುವ ಆಹಾರಧಾನ್ಯಗಳಿಗೆ ನೇರವಾಗಿ ರೈತರಿಗೆ/ಅಕ್ಕಿ ಗಿರಣಿ ಮಾಲೀಕರಿಗೆ ಬ್ಯಾಂಕ್ ಖಾತೆಗೆ ಹಣವನ್ನು ಜಮಾ ಮಾಡುವ ಕುರಿತು.

**ಓದಲಾಗಿದೆ :** ಕೇಂದ್ರ ಸರ್ಕಾರದ ಆಹಾರ ಮಂತ್ರಾಲಯದ ಪತ್ರ ಸಂಖ್ಯೆ : 6/1.2007–PY.III, ದಿನಾಂಕ : 17–10–2013.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಕೇಂದ್ರ ಸರ್ಕಾರದ ಪತ್ರದಲ್ಲಿ ರೈತರಿಂದ ಅಕ್ಕಿ ಗಿರಣಿಗಳು ಖರೀದಿಸುವ ಭತ್ತ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಸಂಗ್ರಹಣಾ ಏಜನ್ಸಿಗಳು ಖರೀದಿಸುವ ಭತ್ತ, ಮೆಕ್ಕಜೋಳ, ರಾಗಿ ಜೋಳ, ಸಜ್ಜೆ ಹಾಗೂ ಇನ್ನಿತರ ಆಹಾರಧಾನ್ಯಗಳಿಗೆ ನೇರವಾಗಿ ರೈತರ ಹೆಸರಿನಲ್ಲಿ **"ಅಕೌಂಟ್ ಪೇಯಿ"** ಚೆಕ್ ಮೂಲಕ ಪಾವತಿಸುವಂತೆ ಪ್ರಸ್ತಾಪಿಸಿದೆ.

ಆದರೆ, ರಾಜ್ಯ ಸರ್ಕಾರವು ಸದರಿ ಪ್ರಕ್ರಿಯೆಯನ್ನು ಈಗಾಗಲೇ ಜಾರಿಗೊಳಿಸಿದ್ದು, ಕಾರ್ಯರೂಪದಲ್ಲಿರುತ್ತದೆ. ಆದರೆ, ಈ ಪ್ರಕ್ರಿಯೆಯನ್ನು ಇನ್ನಷ್ಟು ಸರಳೀಕರಿಸಿ/ಅರ್ಹ ಫಲಾನುಭವಿಗಳಿಗೆ ಪ್ರಯೋಜನವನ್ನು ನೇರವಾಗಿ ತಲುಪಿಸುವ ಉದ್ದೇಶದಿಂದ ಅಕ್ಕಿ ಗಿರಣಿಗಳು ಖರೀದಿಸುವ ಭತ್ತ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಸಂಗ್ರಹಣಾ ಏಜನ್ಸಿಗಳು ಖರೀದಿಸುವ ಭತ್ತ, ಮೆಕ್ಕಜೋಳ, ರಾಗಿ ಜೋಳ, ಸಜ್ಜೆ ಹಾಗೂ ಇನ್ನಿತರ ಆಹಾರಧಾನ್ಯ ಹಾಗೂ ಲೆವಿ ಮೂಲಕ ಅಕ್ಕಿ ಗಿರಣಿಗಳಿಂದ ಸಂಗ್ರಹಿಸುವ ಅಕ್ಕಿ ಖರೀದಿಗೆ ಸಂಬಂಧಿಸಿದಂತೆ ಖರೀದಿ ದರವನ್ನು ನೇರವಾಗಿ ರೈತರ ಬ್ಯಾಂಕ್ ಖಾತೆಗೆ ಜಮಾ ಮಾಡುವುದು ಸೂಕ್ತವೆಂದು ನಿರ್ಧರಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆನಾಸ 19 ಆರ್‌ಪಿಆರ್ 2013, ಬೆಂಗಳೂರು, ದಿನಾಂಕ : 11–11–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರೈತರಿಂದ ಅಕ್ಕಿ ಗಿರಣಿಗಳು ಖರೀದಿಸುವ ಭತ್ತ, ಮೆಕ್ಕೆಜೋಳ, ರಾಗಿ ಜೋಳ, ಸಜ್ಜೆ ಹಾಗೂ ಇನ್ನಿತರ ಆಹಾರಧಾನ್ಯ ಹಾಗೂ ಲೆವಿ ಮೂಲಕ ಅಕ್ಕಿ ಗಿರಣಿಗಳಿಂದ ಸಂಗ್ರಹಿಸುವ ಅಕ್ಕಿ ಖರೀದಿಗೆ ಸಂಬಂಧಿಸಿದಂತೆ ಖರೀದಿ ಮೊತ್ತವನ್ನು ನೇರವಾಗಿ ರೈತರ ಬ್ಯಾಂಕ್ ಖಾತೆಗೆ (RTGS) ಮೂಲಕ ಜಮಾ ಮಾಡಲು ಸರ್ಕಾರವು ಆದೇಶಿಸಿದೆ.

ಕೇಂದ್ರ ಸರ್ಕಾರವು ನಿಗಧಿಪಡಿಸಿದ ಬೆಂಬಲ ಬೆಲೆ ಯೋಜನೆಯನ್ವಯ ಮೆಕ್ಕೆಜೋಳವನ್ನು ರೈತರಿಂದ ನೇರವಾಗಿ ಖರೀದಿಸತಕ್ಕದ್ದು, ಹಾಗೂ ಕೇಂದ್ರ ಸರ್ಕಾರವು ನಿಗಧಿಪಡಿಸಿದ ಗುಣಮಟ್ಟವನ್ನು ಕೃಷಿ ಇಲಾಖೆಯು ಗ್ರೇಡರ್‌ಗಳ ಮೂಲಕ ದೃಢೀಕರಿಸಿದ ನಂತರವೇ ಖರೀದಿಸತಕ್ಕದ್ದು. ಸಣ್ಣ ಮತ್ತು ಮಧ್ಯಮ ರೈತರಿಂದ 25 ಕ್ವಿಂಟಾಲ್‌ಗೆ ಮೀರದಂತೆ ಖರೀದಿಯನ್ನು ನಿರ್ವಹಿಸುವುದು.

ಜಿಲ್ಲೆಯ ಜಿಲ್ಲಾಧಿಕಾರಿಗಳು ತಕ್ಷಣವೇ ಟಾಸ್ಕ್ ಫೋರ್ಸ್ ಸಮಿತಿ ಸಭೆಯನ್ನು ಕರೆದು ಖರೀದಿ ಕೇಂದ್ರಗಳನ್ನು ತೆರೆಯಲು ಕ್ರಮವಹಿಸತಕ್ಕದ್ದು.

ಜಿಲ್ಲಾಧಿಕಾರಿಗಳು ಖಾಲಿಯಿರುವ ಉಗ್ರಾಣಗಳನ್ನು ಗುರುತಿಸಿ, ಮೆಕ್ಕೆಜೋಳ ಸಂಗ್ರಹಣೆಯ ದಾಸ್ತಾನಿನ ಜೊತೆಗೆ ಲೆವಿ ಅಕ್ಕಿ/NCDEX ಮೂಲಕ ಖರೀದಿ ಮಾಡುವ ಅಕ್ಕಿ ಹಾಗೂ ರಾಗಿ ಮತ್ತು ಜೋಳ ಖರೀದಿಗೆ ಬೇಕಾಗುವ ಸ್ಥಳವನ್ನು ಸಹ ಕಾಯ್ದಿರಿಸಿಕೊಳ್ಳತಕ್ಕದ್ದು. ಮೆಕ್ಕಜೋಳ ಖರೀದಿಗೆ ಬೇಕಾಗುವ

ಸ್ಥಳವನ್ನು ಎಲ್ಲಾ ಜಿಲ್ಲೆಗಳಲ್ಲಿ ಕರ್ನಾಟಕ ರಾಜ್ಯ ಉಗ್ರಾಣ ನಿಗಮದಿಂದ ಪಡೆಯತಕ್ಕದ್ದು. ಒಂದು ಪಕ್ಷ ಸರ್ಕಾರದ ಉಗ್ರಾಣಗಳಲ್ಲಿ ಸ್ಥಳಾವಕಾಶ ಇಲ್ಲದಿದ್ದಲ್ಲಿ ಖಾಸಗಿ ಒಡೆತನದ ಗೋದಾಮುಗಳನ್ನು ಕರ್ನಾಟಕ ರಾಜ್ಯ ಉಗ್ರಾಣ ನಿಗಮವು ಬಾಡಿಗೆ ಆಧಾರದ ಮೇಲೆ ಪಡೆದುಕೊಡತಕ್ಕದ್ದು.

ಜಿಲ್ಲಾಧಿಕಾರಿಗಳು ಖರೀದಿ ಪ್ರಕ್ರಿಯೆಯನ್ನು ಸುಗಮವಾಗಿ ನಿರ್ವಹಿಸುವ ದೃಷ್ಟಿಯಿಂದ ಕೃಷಿ ಮಾರುಕಟ್ಟೆ/ತೋಟಗಾರಿಕೆ/ಪಶುಸಂಗೋಪನಾ ಇಲಾಖೆಯ ಹಾಗೂ ಇನ್ನಿತರ ಇಲಾಖೆಯ ಸಿಬ್ಬಂದಿಗಳ ಮೂಲಕ ತಂಡಗಳನ್ನು ರಚಿಸಿ ಕಾರ್ಯನಿರ್ವಹಿಸತಕ್ಕದ್ದು. ಈ ಪ್ರಕ್ರಿಯೆಯಲ್ಲಿ ಲೋಪದೋಷಗಳಿಗೆ ಎಡೆ ಮಾಡಿಕೊಡದಂತೆ ಕ್ರಮವಹಿಸುವುದು.

ರೈತರು ಮೆಕ್ಕಜೋಳವನ್ನು 50 ಕೆ.ಜಿ. ತೂಕದ ಚೀಲಗಳಲ್ಲಿ ತರುವಂತೆ ಸೂಕ್ತವಾಗಿ ಮಾರ್ಗದರ್ಶನ ನೀಡತಕ್ಕದ್ದು.

ದಾಸ್ತಾನು ಮಾಡುವ ಮುನ್ನಾ ಕೇಂದ್ರ ಸರ್ಕಾರವು ನಿಗಧಿಪಡಿಸಿರುವ ಗುಣಮಟ್ಟವನ್ನು ಪರಿಶೀಲಿಸಿ, ನಂತರವೇ ಅದನ್ನು ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದು ಹಾಗೂ ದಾಸ್ತಾನು ರಿಜಿಸ್ಟರನ್ನು ಪ್ರತಿದಿನವು ಕ್ರಮಬದ್ಧವಾಗಿ ನಿರ್ವಹಿಸಲು ಕ್ರಮಕೈಗೊಳ್ಳುವುದು.

ಈ ಪ್ರಕ್ರಿಯೆಯಲ್ಲಿ ಮಧ್ಯವರ್ತಿಗಳು ಭಾಗವಹಿಸದಂತೆ ಕಟ್ಟುನಿಟ್ಟಿನ ಕ್ರಮತೆಗೆದುಕೊಳ್ಳತಕ್ಕದ್ದು.

ಈ ಪ್ರಕ್ರಿಯೆಯು ದಿನಾಂಕ : 31-03-2014ರವರೆವಿಗೆ ಅಥವಾ ಮಾರುಕಟ್ಟೆಯಲ್ಲಿ ಬೆಲೆ ಸ್ಥಿರೀಕರಣಗೊಳ್ಳುವವರೆಗೂ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನಿರ್ವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**PR. 286**
**SC-200**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** 2013–2014ನೇ ಸಾಲಿನಲ್ಲಿ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಖರೀದಿಸುವ ಮೆಕ್ಕೆಜೋಳ ದಾಸ್ತಾನಿಗೆ ರಾಜ್ಯದ ಸಂಗ್ರಹಣಾ ಏಜನ್ಸಿಗಳನ್ನು ಹಾಗೂ ಜಿಲ್ಲೆಗಳನ್ನು ನಿಗಧಿಪಡಿಸುವ ಬಗ್ಗೆ.

**ಓದಲಾಗಿದೆ :** ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : 4(1)2013–ಪಿವೈ.1, ದಿನಾಂಕ : 11ನೇ ಜುಲೈ 2013.

**ಪ್ರಸ್ತಾವನೆ :**

ಮೇಲೆ ಓದಲಾದ ಕೇಂದ್ರ ಸರ್ಕಾರದ ಪತ್ರದಲ್ಲಿ 2013–14ನೇ ಋತುವಿನ ಅವಧಿಗೆ ರೈತರಿಂದ ಕನಿಷ್ಟ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಖರೀದಿಸಬೇಕಾಗಿರುವ ಮೆಕ್ಕೆಜೋಳ ಬೆಂಬಲ ಬೆಲೆಯನ್ನು ಪ್ರತಿ ಕ್ವಿಂಟಾಲ್‌ಗೆ ರೂ. 1310/–ರಂತೆ ನಿಗಧಿಪಡಿಸಿರುತ್ತದೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಸಾಲಿನಲ್ಲಿ ಸಂಗ್ರಹವಾಗುವ ಎಲ್ಲಾ ಆವಕಗಳನ್ನು ಪರಿಗಣಿಸಿ ರೈತರ ಹಿತದೃಷ್ಟಿಯನ್ನು ಗಮನಕ್ಕೆ ತೆಗೆದುಕೊಂಡು ಮೆಕ್ಕೆಜೋಳ ದಾಸ್ತಾನನ್ನು ರಾಜ್ಯಾದ್ಯಂತ ಸಂಗ್ರಹಣೆ ಮಾಡಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆನಾಸ 13 ಆರ್‌ಪಿಆರ್ 2013, ಬೆಂಗಳೂರು, ದಿನಾಂಕ : 22–10–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮೆಕ್ಕೆಜೋಳವನ್ನು ಖರೀದಿಸಲು ಸಂಗ್ರಹಣಾ ಏಜನ್ಸಿ ಹಾಗೂ ಜಿಲ್ಲೆಗಳು ಈ ಕೆಳಕಂಡಂತಿರುತ್ತವೆ.

| ಕರ್ನಾಟಕ ಆಹಾರ ಮತ್ತು ನಾಗರೀಕ ನಿಗಮ ನಿಯಮಿತ | ಕರ್ನಾಟಕ ರಾಜ್ಯ ಸಹಕಾರಿ ಮಾರಾಟ ಮಹಾ ಮಂಡಳ |
|---|---|
| **ಅ) ಮೆಕ್ಕೆಜೋಳ ಸಂಗ್ರಹಣೆಗಾಗಿ :**<br>ಬೆಂಗಳೂರು ಗ್ರಾಮಾಂತರ, ಬೆಂಗಳೂರು (ನಗರ), ಚಾಮರಾಜನಗರ, ಚಿಕ್ಕಮಗಳೂರು, ಕೋಲಾರ, ಮಂಡ್ಯ, ರಾಯಚೂರು, ತುಮಕೂರು, ಉಡುಪಿ, ದಕ್ಷಿಣ ಕನ್ನಡ, ಗುಲ್ಬರ್ಗಾ, ಬೀದರ್, ಉತ್ತರ ಕನ್ನಡ, ರಾಮನಗರ, ಚಿಕ್ಕಬಳ್ಳಾಪುರ, ಮೈಸೂರು, ಯಾದಗಿರಿ, ಬಾಗಲಕೋಟೆ, ಬಳ್ಳಾರಿ, ಹಾವೇರಿ. | **ಮೆಕ್ಕೆಜೋಳ ಸಂಗ್ರಹಣೆಗಾಗಿ :**<br>ಬೆಳಗಾಂ, ಗದಗ, ಧಾರವಾಡ, ಹಾಸನ, ಬಿಜಾಪುರ, ಚಿತ್ರದುರ್ಗ, ಶಿವಮೊಗ್ಗ, ದಾವಣಗೆರೆ, ಕೊಪ್ಪಳ |

ಕೇಂದ್ರ ಸರ್ಕಾರವು ನಿಗಧಿಪಡಿಸಿದ ಬೆಂಬಲ ಬೆಲೆ ಯೋಜನೆಯನ್ವಯ ಮೆಕ್ಕೆಜೋಳವನ್ನು ರೈತರಿಂದ ನೇರವಾಗಿ ಖರೀದಿಸತಕ್ಕದ್ದು, ಹಾಗೂ ಕೇಂದ್ರ ಸರ್ಕಾರವು ನಿಗಧಿಪಡಿಸಿದ ಗುಣಮಟ್ಟವನ್ನು ಕೃಷಿ ಇಲಾಖೆಯು ಗ್ರೇಡರ್‌ಗಳ ಮೂಲಕ ದೃಢೀಕರಿಸಿದ ನಂತರವೇ ಖರೀದಿಸತಕ್ಕದ್ದು. ಸಣ್ಣ ಮತ್ತು ಮಧ್ಯಮ ರೈತರಿಂದ 25 ಕ್ವಿಂಟಾಲ್‌ಗೆ ಮೀರದಂತೆ ಖರೀದಿಯನ್ನು ನಿರ್ವಹಿಸುವುದು.

ಜಿಲ್ಲೆಯ ಜಿಲ್ಲಾಧಿಕಾರಿಗಳು ತಕ್ಷಣವೇ ಟಾಸ್ಕ್ ಫೋರ್ಸ್ ಸಮಿತಿ ಸಭೆಯನ್ನು ಕರೆದು ಖರೀದಿ ಕೇಂದ್ರಗಳನ್ನು ತೆರೆಯಲು ಕ್ರಮವಹಿಸತಕ್ಕದ್ದು.

ಜಿಲ್ಲಾಧಿಕಾರಿಗಳು ಖಾಲಿಯಿರುವ ಉಗ್ರಾಣಗಳನ್ನು ಗುರುತಿಸಿ, ಮೆಕ್ಕೆಜೋಳ ಸಂಗ್ರಹಣೆಯ ದಾಸ್ತಾನಿನ ಜೊತೆಗೆ ಲೆವಿ ಅಕ್ಕಿ/ಎನ್‌ಸಿಡಿಇಎಕ್ಸ್ ಮೂಲಕ ಖರೀದಿ ಮಾಡುವ ಹಾಗೂ ರಾಗಿ ಮತ್ತು ಜೋಳ ಖರೀದಿಗೆ ಬೇಕಾಗುವ ಸ್ಥಳವನ್ನು ಸಹ ಕಾಯ್ದಿರಿಸಿಕೊಳ್ಳತಕ್ಕದ್ದು. ಮೆಕ್ಕಜೋಳ ಖರೀದಿಗೆ ಬೇಕಾಗುವ ಎಲ್ಲಾ ಜಿಲ್ಲೆಗಳಲ್ಲಿ ಕರ್ನಾಟಕ ರಾಜ್ಯ ಉಗ್ರಾಣ ನಿಗಮದಿಂದ ಪಡೆಯತಕ್ಕದ್ದು. ಒಂದು ಪಕ್ಷ ಸರ್ಕಾರದ ಉಗ್ರಾಣಗಳಲ್ಲಿ ಸ್ಥಳಾವಕಾಶ ಇಲ್ಲದಿದ್ದಲ್ಲಿ ಖಾಸಗಿ ಒಡೆತನದ ಗೋದಾಮುಗಳನ್ನು ಕರ್ನಾಟಕ ರಾಜ್ಯ ಉಗ್ರಾಣ ನಿಗಮವು ಬಾಡಿಗೆ ಆಧಾರದ ಮೇಲೆ ಪಡೆದುಕೊಡತಕ್ಕದ್ದು.

ಜಿಲ್ಲಾಧಿಕಾರಿಗಳು ಖರೀದಿ ಪ್ರಕ್ರಿಯೆಯನ್ನು ಸುಗಮವಾಗಿ ನಿರ್ವಹಿಸುವ ದೃಷ್ಟಿಯಿಂದ ಕೃಷಿ ಮಾರುಕಟ್ಟೆ/ತೋಟಗಾರಿಕೆ/ಪಶುಸಂಗೋಪನಾ ಇಲಾಖೆಯ ಹಾಗೂ ಇನ್ನಿತರ ಇಲಾಖೆಯ ಸಿಬ್ಬಂದಿಗಳ ಮೂಲಕ ತಂಡಗಳನ್ನು ರಚಿಸಿ ಕಾರ್ಯನಿರ್ವಹಿಸತಕ್ಕದ್ದು. ಈ ಪ್ರಕ್ರಿಯೆಯಲ್ಲಿ ಲೋಪದೋಷಗಳಿಗೆ ಎಡೆ ಮಾಡಿಕೊಡದಂತೆ ಕ್ರಮವಹಿಸುವುದು.

ರೈತರು ಮೆಕ್ಕೆಜೋಳವನ್ನು 50 ಕೆ.ಜಿ. ತೂಕದ ಚೀಲಗಳಲ್ಲಿ ತರುವಂತೆ ಸೂಕ್ತವಾಗಿ ಮಾರ್ಗದರ್ಶನ ನೀಡತಕ್ಕದ್ದು.

ದಾಸ್ತಾನು ಮಾಡುವ ಮುನ್ನಾ ಕೇಂದ್ರ ಸರ್ಕಾರವು ನಿಗಧಿಪಡಿಸಿರುವ ಗುಣಮಟ್ಟವನ್ನು ಪರಿಶೀಲಿಸಿ, ನಂತರವೇ ಅದನ್ನು ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದು ಹಾಗೂ ದಾಸ್ತಾನು ರಿಜಿಸ್ಟ್ರರನ್ನು ಪ್ರತಿದಿನವು ಕ್ರಮಬದ್ಧವಾಗಿ ನಿರ್ವಹಿಸಲು ಕ್ರಮಕೈಗೊಳ್ಳುವುದು.

ಈ ಪ್ರಕ್ರಿಯೆಯಲ್ಲಿ ಮಧ್ಯವರ್ತಿಗಳು ಭಾಗವಹಿಸದಂತೆ ಕಟ್ಟುನಿಟ್ಟಿನ ಕ್ರಮತೆಗೆದುಕೊಳ್ಳತಕ್ಕದ್ದು.

ಈ ಪ್ರಕ್ರಿಯೆಯು ದಿನಾಂಕ : 31-03-2014ರವರೆವಿಗೆ ಅಥವಾ ಮಾರುಕಟ್ಟೆಯಲ್ಲಿ ಬೆಲೆ ಸ್ಥಿರೀಕರಣಗೊಳ್ಳುವವರೆಗೂ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನಿರ್ವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**PR. 287**
**SC-200**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ನಿರ್ದಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿ (TPDS)ಯಡಿ ರಾಜ್ಯ ಮಟ್ಟದಲ್ಲಿ ಜಾಗೃತ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ : ಆನಾಸ 148 ಡಿಆರ್ಎ 2010, ದಿನಾಂಕ : 29-10-2011.

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರದ ದಿನಾಂಕ : 29-10-2011ರ ಆದೇಶದಲ್ಲಿ ನಿರ್ದಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿಯಡಿಯ ಕಾರ್ಯ ಚಟುವಟಿಕೆಗಳನ್ನು ನಿಯಮಿತವಾಗಿ ಪರಿಶೀಲಿಸಲು ರಾಜ್ಯ ಮಟ್ಟದ ಜಾಗೃತ ಸಮಿತಿಗಳನ್ನು ರಚಿಸಲಾಗಿತ್ತು.

ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆಯ ಅಧ್ಯಾಯ XI (Chapter XI of the National Food Security Act) ರನ್ವಯ ನಿರ್ದಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿ (TPDS)ಯ ಅನುಷ್ಠಾನದಲ್ಲಿ ಪಾರದರ್ಶಕತೆ ಹಾಗೂ ಹೊಣೆಗಾರಿಕೆ ಇರುವುದನ್ನು ಖಚಿತಪಡಿಸಿಕೊಳ್ಳುವ ದೃಷ್ಟಿಯಿಂದ ಪ್ರತಿಯೊಂದು ರಾಜ್ಯವು ಅಗತ್ಯ ವಸ್ತುಗಳ ಕಾಯ್ದೆ 1955ರಡಿ ರಚಿಸಲಾಗಿರುವ ಸಾರ್ವಜನಿಕ ವಿತರಣಾ ಪದ್ಧತಿ (ನಿಯಂತ್ರಣ) ಆದೇಶ 2001 (Pblic Distribution System (Control) Order 2001) ಅಡಿಯಲ್ಲಿ ನಿರ್ದಿಷ್ಟ ಪಡಿಸಿರುವಂತೆ ಸ್ಥಳೀಯ ಪ್ರಾಧಿಕಾರ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಮಹಿಳೆಯರು, ದುರ್ಬಲರು/ಅಂಗವಿಕಲರು ಇವರುಗಳ ಪ್ರತಿನಿಧಿಗಳನ್ನೊಳಗೊಂಡ ರಾಜ್ಯ, ಜಿಲ್ಲೆ, ತಾಲ್ಲೂಕು ಹಾಗೂ ನ್ಯಾಯಬೆಲೆ ಅಂಗಡಿ ಮಟ್ಟದ ಜಾಗೃತಿ ಸಮಿತಿಗಳನ್ನು ರಚಿಸುವುದು ಕಡ್ಡಾಯವಾಗಿರುತ್ತದೆ. ಅಲ್ಲದೆ ರಾಜ್ಯದಲ್ಲಿ ಜಾರಿಗೊಳಿಸಲಾಗುತ್ತಿರುವ ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ ಹಾಗೂ **"ಅನ್ನಭಾಗ್ಯ"** ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ರಾಜ್ಯ ಮಟ್ಟದ ಜಾಗೃತಿ ಸಮಿತಿಯನ್ನು ಪುನರ್ ರಚಿಸುವ ಅಗತ್ಯವಿರುತ್ತದೆ. ಈ ಹಿನ್ನೆಲೆಯಲ್ಲಿ ಈ ಹಿಂದೆ ರಾಜ್ಯ ಮಟ್ಟದ ಜಾಗೃತಿ ಸಮಿತಿಯನ್ನು ರಚಿಸಿ ಹೊರಡಿಸಲಾಗಿದ್ದ ದಿನಾಂಕ : 29-10-2011ರ ಆದೇಶವನ್ನು ರದ್ದುಪಡಿಸಿ, ರಾಜ್ಯ ಮಟ್ಟದ ಜಾಗೃತ ಸಮಿತಿಯನ್ನು ಪುನರ್ ರಚಿಸಿ ಈ ಕೆಳಗಿನಂತೆ ಆದೇಶಿಸಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ್ದು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆನಾಸ 352 ಡಿಆರ್ಎ 2013, ಬೆಂಗಳೂರು, ದಿನಾಂಕ : 28ನೇ ಫೆಬ್ರವರಿ 2014.**

ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆಯ ಅಧ್ಯಾಯ XI (Chapter XI of the National Food Security Act) ರನ್ವಯ ನಿರ್ದಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿ (TPDS)ಯ ಅನುಷ್ಠಾನದಲ್ಲಿ ಪಾರದರ್ಶಕತೆ ಹಾಗೂ ಹೊಣೆಗಾರಿಕೆ ಇರುವುದನ್ನು ಖಚಿತಪಡಿಸಿಕೊಳ್ಳುವ ದೃಷ್ಟಿಯಿಂದ ರಾಜ್ಯ ಮಟ್ಟದ ಜಾಗೃತ ಸಮಿತಿಯು ಈ ಕೆಳಕಂಡ ಕಾರ್ಯಗಳನ್ನು ವಹಿಸಲು ಉದ್ದೇಶಿಸಲಾಗಿದೆ.

**ರಾಜ್ಯ ಮಟ್ಟದ ಜಾಗೃತ ಸಮಿತಿಯ ಕಾರ್ಯ ಚಟುವಟಿಕೆಗಳು :**

1. ಸಾರ್ವಜನಿಕ ವಿತರಣಾ ಪದ್ಧತಿ (ನಿಯಂತ್ರಣ) ಆದೇಶ 2001 ಕಾಯ್ದೆಯಡಿ ಬರುವ ಎಲ್ಲಾ ಯೋಜನೆಗಳ ಜಾರಿ ಬಗ್ಗೆ ನಿಯಮಿತವಾಗಿ ಮೇಲ್ವಿಚಾರಣೆ ನಡೆಸುವುದು.
2. ಸದರಿ ಕಾಯ್ದೆಯನ್ನು ಉಲ್ಲಂಘಿಸಿದವರ ವಿರುದ್ಧ ಜಿಲ್ಲಾ ಸಾರ್ವಜನಿಕ ಕುಂದುಕೊರತೆ ಅಧಿಕಾರಿಗೆ ಪತ್ರ ಮುಖೇನ ತಿಳಿಸುವುದು.
3. ಯೋಜನೆಗೆ ಸಂಬಂಧಿಸಿದ ಹಣವನ್ನು ದುರುಪಯೋಗ ಪಡಿಸಿಕೊಳ್ಳುವವರ ವಿರುದ್ಧ ಜಿಲ್ಲಾ ಸಾರ್ವಜನಿಕ ಕುಂದುಕೊರತೆ ಅಧಿಕಾರಿಗೆ ಪತ್ರ ಮುಖೇನ ತಿಳಿಸುವುದು.
4. ರಾಜ್ಯ ಮಟ್ಟದ ಜಾಗೃತಿ ಸಮಿತಿಯು 3 ತಿಂಗಳಿಗೆ ಕನಿಷ್ಠ ಒಂದು ಬಾರಿಯಾದರೂ ಸಭೆ ಸೇರತಕ್ಕದ್ದು.

ಮೇಲಿನ ಕಾರ್ಯ ಚಟುವಟಿಕೆಗಳನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ರಾಜ್ಯ ಮಟ್ಟದ ಜಾಗೃತ ಸಮಿತಿಯನ್ನು ಈ ಕೆಳಗಿನಂತೆ ಪುನರ್ ರಚಿಸಿ, ಆದೇಶಿಸಿದೆ.

**ರಾಜ್ಯ ಮಟ್ಟದ ಜಾಗೃತ ಸಮಿತಿ :**

1. ಆಹಾರ ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖಾ ಸಚಿವರು – ಅಧ್ಯಕ್ಷರು
2. ಅಪರ ಮುಖ್ಯ ಕಾರ್ಯದರ್ಶಿ, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳು ಇಲಾಖೆ – ಸದಸ್ಯರು
3. ಅಪರ ಮುಖ್ಯ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ಇಲಾಖೆ – ಸದಸ್ಯರು
4. ಅಪರ ಮುಖ್ಯ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ – ಸದಸ್ಯರು

5. ಪ್ರಧಾನ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ – ಸದಸ್ಯರು
6. ಪ್ರಧಾನ ಕಾರ್ಯದರ್ಶಿ, ಕೃಷಿ ಇಲಾಖೆ – ಸದಸ್ಯರು
7. ಕಾರ್ಯದರ್ಶಿ, ಸಹಕಾರ ಇಲಾಖೆ – ಸದಸ್ಯರು
8. ವ್ಯವಸ್ಥಾಪಕ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತ – ಸದಸ್ಯರು
9. ಪ್ರಧಾನ ವ್ಯವಸ್ಥಾಪಕರು, ಭಾರತ ಆಹಾರ ನಿಗಮ – ಸದಸ್ಯರು
10. ನಿಯಂತ್ರಕರು, ಕಾನೂನು ಮಾಪನ ಶಾಸ್ತ್ರ ಇಲಾಖೆ – ಸದಸ್ಯರು
11. ರಾಜ್ಯ ಮಟ್ಟದ ಸಮನ್ವಯ ಅಧಿಕಾರಿ, ಭಾರತೀಯ ತೈಲ ನಿಗಮ – ಸದಸ್ಯರು
12. ಗ್ರಾಹಕರ ಕ್ಷೇಮಾಭಿವೃದ್ಧಿ ಸಂಘದ ಪ್ರತಿನಿಧಿ – ಸದಸ್ಯರು
13. ನ್ಯಾಯಬೆಲೆ ಅಂಗಡಿ ಮಟ್ಟದ ಜಾಗೃತ ಸಮಿತಿಯ ಪ್ರತಿನಿಧಿಗಳು – ಮೂರು ಸದಸ್ಯರು
14. ಜಿಲ್ಲಾ ಮಟ್ಟದ ಜಾಗೃತ ಸಮಿತಿಯ ಪ್ರತಿನಿಧಿಗಳು – ಮೂರು ಸದಸ್ಯರು
15. ಸಗಟು ನಾಮಿನಿದಾರರಾಗಿರುವ ತಾಲ್ಲೂಕು ಕೃಷಿ ಉತ್ಪನ್ನ ಮಾರಾಟ ಸಹಕಾರ ಸಂಘಗಳ ಪ್ರತಿನಿಧಿ – ಸದಸ್ಯರು
16. ಐದು ಜನ ಸರ್ಕಾರೇತರ ಸದಸ್ಯರು ಈ ಪೈಕಿ ಕನಿಷ್ಠ ಒಬ್ಬರು ಪರಿಶಿಷ್ಟ ಜಾತಿಗೆ ಸೇರಿರಬೇಕು ಹಾಗೂ ಕನಿಷ್ಠ ಒಬ್ಬರು ಮಹಿಳಾ ಸದಸ್ಯರಾಗಿರಬೇಕು – 5 ಸದಸ್ಯರು
17. ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ – ಸದಸ್ಯ ಕಾರ್ಯದರ್ಶಿ

ಮೇಲಿನ ಸದಸ್ಯರನ್ನೊಳಗೊಂಡ ರಾಜ್ಯ ಮಟ್ಟದ ಜಾಗೃತಿ ಸಮಿತಿಯಲ್ಲಿ 5 ಜನ ಸರ್ಕಾರೇತರ ಸದಸ್ಯರು ಸಾಮಾಜಿಕ ಕ್ಷೇತ್ರದಲ್ಲಿ/ಮಹಿಳಾ ಸಂಘಟನೆಗಳಲ್ಲಿ/ಎನ್‌ಜಿಒ ಸಂಸ್ಥೆಗಳಲ್ಲಿ/ಶೈಕ್ಷಣಿಕ/ಆಹಾರ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿರಬೇಕು. ರಾಜ್ಯ ಮಟ್ಟದ ಜಾಗೃತಿ ಸಮಿತಿಯ ಅಧಿಕಾರ ಅವಧಿಯು 2 ವರ್ಷ ಆಗಿರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**PR. 288**
**SC-1000**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** **ಭತ್ತ ಮತ್ತು ತೃಣ ಧಾನ್ಯಗಳನ್ನು ಖರೀದಿ ನಂತರ ಸಾಗಾಣಿಕೆ ಹಾಗೂ ನಿರ್ವಹಣೆ ಮಾಡಲು ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತಕ್ಕೆ ಗುತ್ತಿಗೆದಾರರನ್ನು ನೇಮಕ ಮಾಡಲು, ಆಹಾರ ಧಾನ್ಯಗಳ ಗುಣಮಟ್ಟ ಪರಿಶೀಲಿಸಲು Assayer ನ್ನು ನೇಮಕ ಮಾಡಲು ಮತ್ತು ರೇಷ್ಮೆ ಇಲಾಖೆಯ (ತಾಂತ್ರಿಕ ನಿಪುಣತೆಯಲ್ಲದ) ಸಿಬ್ಬಂದಿಯನ್ನು ಸಂಗ್ರಹಣಾ ಕಾರ್ಯಕ್ಕೆ ನಿಯೋಜಿಸುವ–ಬಗ್ಗೆ.**

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತರವರ ಪತ್ರ ದಿನಾಂಕ : 27–12–2013 ಮತ್ತು ದಿನಾಂಕ : 16–01–2014.

**ಪ್ರಸ್ತಾವನೆ :**

ಕರ್ನಾಟಕ ರಾಜ್ಯ ಆಹಾರ ಮತ್ತು ನಾಗರೀಕ ಸರಬರಾಜು ನಿಗಮವು ರೈತರಿಂದ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ರಾಗಿ ಮತ್ತು ಭತ್ತವನ್ನು ರಾಜ್ಯಾದ್ಯಂತ ಖರೀದಿಸಲು 2013–14ನೇ ಸಾಲಿನ (ಮುಂಗಾರು ಋತು) ಅಧಿಕೃತ ಸಂಗ್ರಹಣಾ ಏಜೆನ್ಸಿಯಾಗಿದ್ದು, ನಿಗಮವು ಸಾಗಾಣಿಕೆ ಮತ್ತು ನಿರ್ವಹಣಾ ಕಾರ್ಯಕ್ಕೆ ಯಾವುದೇ ಬಿಡ್‌ಗಳನ್ನು ಅಂತ್ಯಗೊಳಿಸದೇ ಇರುವುದರಿಂದ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ ಕರ್ನಾಟಕ ಪಾರದರ್ಶಕ ಅಧ್ಯಾದೇಶದ 4 (ಜಿ) ಅಡಿಯಲ್ಲಿ ವಿನಾಯ್ತಿಯನ್ನು ನೀಡುವಂತೆ ಕೋರಿರುತ್ತದೆ. ಇದಲ್ಲದೆ, ಕರ್ನಾಟಕ ರಾಜ್ಯ ಉಗ್ರಾಣ ನಿಗಮ ಮತ್ತು ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳವು ತನ್ನ ಜಿಲ್ಲೆಗಳಲ್ಲಿ ಭತ್ತ ಮತ್ತು ಮೆಕ್ಕೆಜೋಳ ಸಂಗ್ರಹಣೆ ಮಾಡುವ ಕಾರ್ಯಕ್ಕೆ ನಿಗದಿಪಡಿಸಿರುವ ಸಾಗಾಣಿಕಾ ಮತ್ತು ನಿರ್ವಹಣಾ ದರದಲ್ಲಿಯೇ ನಿರ್ವಹಿಸಲು ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮಕ್ಕೆ ಅನುಮತಿಸುವಂತೆ ಕೋರಿರುತ್ತದೆ. ಇನ್ನುಳಿದ ಜಿಲ್ಲೆಗಳಲ್ಲಿ ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮಕ್ಕೆ ಜಿಲ್ಲಾಧಿಕಾರಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿ ಕರ್ನಾಟಕ ರಾಜ್ಯ ಉಗ್ರಾಣ ನಿಗಮ ಮತ್ತು ಕೇಂದ್ರ ಉಗ್ರಾಣ ನಿಗಮದ ದರದಲ್ಲಿ ನಿರ್ಧರಿಸಲು ಕೋರಿರುತ್ತದೆ. ಅಲ್ಲದೆ ಗೋದಾಮುಗಳ ಅಲಭ್ಯತೆಯಿಂದ ಮೆಕ್ಕೆಜೋಳ ಶೇಖರಣೆ ಕಾರ್ಯಕ್ಕೆ ಉಂಟಾಗಿರುವ ಅನಾನುಕೂಲ ಹಾಗೂ ಸಂಗ್ರಹಿಸಲಾಗುವ ಆಹಾರ ಧಾನ್ಯಗಳ ಗುಣಮಟ್ಟ ಪರೀಕ್ಷಣೆ ಕುರಿತಂತೆ ಸರ್ಕಾರವು ಗಮನಿಸಿದೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆನಾಸ 04 ಆರ್‌ಪಿಆರ್ 2014, ಬೆಂಗಳೂರು, ದಿನಾಂಕ : 15–02–2014.**

2013–14ನೇ ಸಾಲಿನ ಬೆಂಬಲ ಬೆಲೆ ಯೋಜನೆ ಅಡಿಯಲ್ಲಿ ಖರೀದಿಸುವ ಒರಟು ಧಾನ್ಯ/ಭತ್ತದ ಸಾಗಾಣಿಕೆ ಗುತ್ತಿಗೆದಾರರ ನಿಯೋಜನೆಗೆ ಸಂಬಂಧಿಸಿದಂತೆ ಯಾವುದೇ ಬಿಡ್ ಬಾರದ 17 ಜಿಲ್ಲೆಗಳಿಗೆ, ರಾಜ್ಯ ಉಗ್ರಾಣ ನಿಗಮವು ನಡೆಸಿದ ಟೆಂಡರ್ ಪ್ರಕ್ರಿಯೆಯಲ್ಲಿ ಶಿವಮೊಗ್ಗ ಜಿಲ್ಲೆಗೆ ನಮೂದಾದ ಅನುಮೋದಿತ ಸಾಗಾಣಿಕೆ ಹಾಗೂ ನಿರ್ವಹಣಾ ದರವನ್ನು ಅಳವಡಿಸಿಕೊಂಡು ಸಾಗಾಣಿಕೆ ಹಾಗೂ ನಿರ್ವಹಣಾ ಕಾರ್ಯವನ್ನು ನಿರ್ವಹಿಸತಕ್ಕದ್ದು, ರಾಗಿ ಮತ್ತು ಜೋಳ ಖರೀದಿಗೆ ನಿಯೋಜಿಸಿದ ಜಿಲ್ಲೆಗಳಲ್ಲಿ ರಾಜ್ಯ ಉಗ್ರಾಣ ನಿಗಮ ಮತ್ತು ಕರ್ನಾಟಕ ರಾಜ್ಯ ಸಹಕಾರಿ ಮಾರಾಟ ಮಹಾಮಂಡಳ ಸಂಸ್ಥೆಯವರ ಅನುಮೋದಿತ ಟೆಂಡರ್ ದರದಲ್ಲಿ ಸಾಗಾಣಿಕೆ ಹಾಗೂ ನಿರ್ವಹಣಾ ದರವನ್ನು ಅಳವಡಿಸಿಕೊಂಡು ಸಾಗಾಣಿಕೆ ಹಾಗೂ ನಿರ್ವಹಣಾ ಕಾರ್ಯವನ್ನು

ನಿರ್ವಹಿಸತಕ್ಕದ್ದು. ಹಾವೇರಿ ಜಿಲ್ಲೆಗೆ ಸಂಬಂಧಿಸಿದಂತೆ ಟೆಂಡರ್ ಪ್ರಕ್ರಿಯೆಯಲ್ಲಿ ನಿಯೋಜನೆಗೊಂಡ ಟೆಂಡರ್‌ದಾರರು ಕಾರ್ಯನಿರ್ವಹಿಸಲು ಮುಂದೆಬರದ ಕಾರಣ ಅನುಮೋದಿತ ಟೆಂಡರ್ ದರದಲ್ಲಿ ಜಿಲ್ಲೆಯ ಪಡಿತರ ಸಾಗಾಣಿಕೆ ಗುತ್ತಿಗೆದಾರರಿಂದ ಕಾರ್ಯನಿರ್ವಹಿಸಿಕೊಳ್ಳತಕ್ಕದ್ದು ಮತ್ತು ಜಿಲ್ಲಾಧಿಕಾರಿಗಳಿಗೆ ಸ್ಥಳೀಯ ಸಾಗಾಣಿಕೆ ಗುತ್ತಿಗೆದಾರರ ಮೂಲಕ ಸಾಗಾಣಿಕೆ ಮತ್ತು ನಿರ್ವಹಣೆ ವ್ಯವಸ್ಥೆಯನ್ನು ನಿರ್ವಹಿಸಲು ಅಧಿಕಾರ ಪ್ರತ್ಯಾಯೋಜಿಸಿ ಆದೇಶಿಸಿದೆ.

ಮೆಕ್ಕೆಜೋಳ ಹಾಗೂ ಇತರ ಆಹಾರ ಧಾನ್ಯಗಳನ್ನು ಬೆಂಬಲ ಬೆಲೆ ಯೋಜನೆ ಅಡಿ ಖರೀದಿ ಪ್ರಾರಂಭ ಮಾಡಿದ ವೇಳೆಯಲ್ಲಿ ನಿರ್ವಹಣೆ ಮತ್ತು ಸಾಗಾಣಿಕೆ ಟೆಂಡರ್ ಕರೆದು ದರಗಳನ್ನು ಅಂತಿಮಗೊಳಿಸಿರಲಿಲ್ಲ. ಈ ಹಿನ್ನೆಲೆಯಲ್ಲಿ ಆಯಾ ಜಿಲ್ಲೆಗಳಲ್ಲಿ ಆಯಾ ಏಜೆನ್ಸಿಗಳು ಟೆಂಡರ್ ಪ್ರಕ್ರಿಯೆ ನಡೆಸಿ ನಿರ್ವಹಣೆ ಮತ್ತು ಸಾಗಾಣಿಕೆಗೆ L-1 ದರಗಳನ್ನು ನಿಗದಿಪಡಿಸಿದ್ದು, ಇದೇ L-1 ದರಗಳನ್ನು ಪೂರ್ವಾನ್ವಯವಾಗುವಂತೆ ಆಯಾ ಏಜೆನ್ಸಿಗಳು ಪಾವತಿಸಲು ಅನುಮತಿ ನೀಡಿದೆ.

The National Collateral Management Limited (NCML), ಮುಂಬಯಿ, ಸಂಸ್ಥೆಯನ್ನು ಮೆಕ್ಕೆಜೋಳ, ರಾಗಿ, ಬಿಳಿಜೋಳ ಮತ್ತು ಭತ್ತ ಆಹಾರಧಾನ್ಯಗಳ ಗುಣಮಟ್ಟ ಪರೀಕ್ಷೆಯನ್ನು ನಿರ್ವಹಿಸಲು Third party assayer ಆಗಿ ನೇಮಕ ಮಾಡತಕ್ಕದ್ದು. ಗುಣಮಟ್ಟ ಪರೀಕ್ಷೆಗಾಗಿ ಪ್ರತಿ ಮೆ. ಟನ್‌ಗೆ ರೂ. 8.82 ದರವನ್ನು ನಿಗದಿಪಡಿಸಲಾಗಿತ್ತು. ಆದರೆ ರಾಜ್ಯದ ಮೂರು ಖರೀದಿ ಏಜೆನ್ಸಿಗಳು ಬೆಂಬಲ ಬೆಲೆ ಯೋಜನೆಯಡಿ ಹೆಚ್ಚಿನ ದಾಸ್ತಾನು ಖರೀದಿಸಿದ್ದು, NCML ಸಂಸ್ಥೆಯೊಂದಿಗೆ ದರದ ಬಗ್ಗೆ ಸಮಾಲೋಚನೆ ನಡೆಸಿ ಪ್ರತಿ ಟನ್‌ಗೆ ರೂ. 4.50 ರಂತೆ ದರವನ್ನು ಪುನರ್ ನಿಗದಿಪಡಿಸಿದೆ. ಈ ದರವು ಈವರೆಗೆ ಖರೀದಿ ಮಾಡಲಾದ ಹಾಗೂ ಮುಂದೆ ಖರೀದಿ ಮಾಡಲಾಗುವ ಎಲ್ಲಾ ಕೃಷಿ ಉತ್ಪನ್ನಗಳಿಗೆ ಅನ್ವಯವಾಗುತ್ತದೆ. ಈ ವ್ಯವಸ್ಥೆಯು 2013–14ನೇ ಸಾಲಿನ ಮುಂಗಾರು ಮತ್ತು ಹಿಂಗಾರು ಸಾಲಿಗೆ ಅನ್ವಯವಾಗುತ್ತದೆ.

ಜಿಲ್ಲಾಧಿಕಾರಿಗಳು, ನಿರ್ಮಿತಿ ಕೇಂದ್ರಗಳ ಮೂಲಕ CAP Storage ನಿರ್ಮಾಣ ಮಾಡಲು ಆದೇಶಿಸಿದೆ. ಜಿಲ್ಲಾಧಿಕಾರಿಗಳು ಈ ಬಗ್ಗೆ ಯೋಗ್ಯ ಜಾಗವನ್ನು ಗುರುತಿಸಿ ನಿರ್ಮಿತಿ ಕೇಂದ್ರಗಳ ಮೂಲಕ CAP Storage ನ Plinth ನ್ನು ನಿರ್ಮಾಣ ಮಾಡಲು ಅಗತ್ಯವಿರುವ ಸರ್ವೇ ಮರದ ಪೋಲ್‌ಗಳ ಹಾಗೂ ಇತರೆ ಸಾಮಗ್ರಿಗಳನ್ನು ಆಯಾ ಜಿಲ್ಲೆಯ ಲೋಕೋಪಯೋಗಿ ಇಲಾಖೆಯ Circle ಗಳ S.R. ದರಗಳನ್ವಯ ಖರೀದಿಸಿ. CAP Storage ನಿರ್ಮಾಣ ಮಾಡುವುದು. ಈ Storage ಗೆ ಬೇಕಾಗಿರುವ L.D.B.P. Covers ಗಳನ್ನು ಭಾರತ ಆಹಾರ ನಿಗಮ ಇವರ ಒಂದು ವರ್ಷದ ಹಿಂದೆ ಪ್ರತಿ ಕವರ್‌ಗೆ ರೂ. 7600/–ಗಳಂತೆ ಖರೀದಿಸಿದ್ದು. ಈ ದರಗಳನ್ನು ಆಧಾರವಾಗಿಟ್ಟುಕೊಂಡು L.D.B.P. Covers ನ್ನು ಖರೀದಿಸುವುದು. CAP Storage ಅಗತ್ಯವಿರುವ ಸಿಬ್ಬಂದಿಯನ್ನು ರೇಷ್ಮೆ ಇಲಾಖೆಯಿಂದ ನಿಯೋಜನೆ ಮೇಲೆ ಪಡೆದು ಸರಕು ದಾಸ್ತಾನಿನಿಂದ ಸರಕು ವಿಲೇವಾರಿವಾಗುವರೆಗೆ, ಎಲ್ಲಾ ಲೆಕ್ಕ ಪತ್ರಗಳನ್ನು ಅಂತಿಮಗೊಳಿಸುವರೆಗೆ ಸದರಿಯವರಿಗೆ ಜವಾಬ್ದಾರಿಯನ್ನು ನಿಗದಿಪಡಿಸಿ ನಿಯೋಜಿಸಲು ಸೂಚಿಸಲಾಗಿದೆ ಹಾಗೂ ಅಗತ್ಯವಿರುವ ಸೂಕ್ತ ಭದ್ರತಾ ಸಿಬ್ಬಂದಿಗಳ್ಳನು (Police/Home Guards) CAP Storage ಗೆ ನಿಯೋಜಿಸತಕ್ಕದ್ದು.

ಪ್ರಸಕ್ತ ಬೆಂಬಲ ಬೆಲೆ ಖರೀದಿ ಪ್ರಕ್ರಿಯೆಗೆ ಹಾಗೂ ಸರಕು ಬಿಡುಗಡೆಯಾಗುವರೆಗೆ ಕೇಂದ್ರ ಉಗ್ರಾಣ ನಿಗಮವು (CWC) ಟೆಂಡರ್‌ಗಳನ್ನು ಕರೆದು, ಮಾನವ ಸಂಪನ್ಮೂಲ ಸಂಸ್ಥೆಗಳಿಂದ ಸಿಬ್ಬಂದಿಯನ್ನು ನೇಮಕ ಮಾಡಿಕೊಂಡಿರುವ L-1 ದರದಂತೆ ಕೆಟಿಪಿಪಿ ಕಾಯ್ದೆ ಕಲಂ 4ಜಿ ಅಡಿಯಲ್ಲಿ ವಿನಾಯಿತಿ ನೀಡಿ ರಾಜ್ಯದ ಮೂರು ಖರೀದಿ ಏಜೆನ್ಸಿಗಳು ಬೆಂಬಲ ಬೆಲೆ ಯೋಜನೆಗೆ ಅಗತ್ಯವಿರುವ ಸಿಬ್ಬಂದಿಗಳನ್ನು ನೇಮಿಸಿಕೊಳ್ಳಲು ಅನುಮತಿ ನೀಡಿದೆ.

ಜಿಲ್ಲಾಧಿಕಾರಿಗಳು, ರೇಷ್ಮೆ ಇಲಾಖೆಯಲ್ಲಿ ಅಗತ್ಯಕ್ಕಿಂತ ಹೆಚ್ಚಿಗೆ ಇರುವ ಹೆಚ್ಚಿನ ಸಿಬ್ಬಂದಿಗಳ ಸೇವೆಯನ್ನು ರೇಷ್ಮೆ ಇಲಾಖೆಯಿಂದ ಪಡೆದು ಸಂಗ್ರಹಣಾ ಏಜೆನ್ಸಿಗಳಾದ ಕರ್ನಾಟಕ ಆಹಾರ, ನಾಗರೀಕ ಸರಬರಾಜು ನಿಗಮ, ಕರ್ನಾಟಕ ರಾಜ್ಯ ಉಗ್ರಾಣ ನಿಗಮ ಮತ್ತು ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಲದ ಖರೀದಿ, ದಾಸ್ತಾನು, ವಿಲೇವಾರಿವರೆಗೆ, ಎಲ್ಲಾ ಲೆಕ್ಕ ಪತ್ರಗಳನ್ನು ಅಂತಿಮಗೊಳಿಸುವರೆಗೆ ಜವಾಬ್ದಾರಿಯನ್ನು ನಿಗದಿಪಡಿಸಿ ನಿಯೋಜಿಸಿ ಪ್ರಕ್ರಿಯೆಗೆ ಬಳಸಿಕೊಳ್ಳಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

PR. 289
SC-200

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ** : 2013–14ನೇ ಮುಂಗಾರು ಋತುವಿನ ಅವಧಿಗೆ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಖರೀದಿಸುವ ಮೆಕ್ಕೆಜೋಳ ಖರೀದಿ ಪ್ರಮಾಣದಲ್ಲಿ ವಿಧಿಸಿರುವ ಮಿತಿಯನ್ನು ಹಿಂಪಡೆಯುವ–ಬಗ್ಗೆ.

**ಓದಲಾಗಿದೆ :**
1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : 4(1)/2013–ಪಿವೈ.ಐ., ದಿನಾಂಕ : 11–07–2013.
2. ಸರ್ಕಾರಿ ಆದೇಶ ಸಂಖ್ಯೆ : ಆನಾಸ 13 ಆರ್‌ಪಿಆರ್ 2013, ದಿನಾಂಕ : 22–10–2013.
3. ಸರ್ಕಾರಿ ಆದೇಶ ಸಂಖ್ಯೆ : ಆನಾಸ 13 ಆರ್‌ಪಿಆರ್ 2013, ದಿನಾಂಕ : 13–11–2013.
4. ಸರ್ಕಾರಿ ಆದೇಶ ಸಂಖ್ಯೆ : ಆನಾಸ 13 ಆರ್‌ಪಿಆರ್ 2013, ದಿನಾಂಕ : 27–11–2013.
5. ಸರ್ಕಾರಿ ಆದೇಶ ಸಂಖ್ಯೆ : ಆನಾಸ 13 ಆರ್‌ಪಿಆರ್ 2013, ದಿನಾಂಕ : 16–01–2014.

**ಪ್ರಸ್ತಾವನೆ :**

ಮೇಲೆ ಓದಲಾದ (5)ರ ಸರ್ಕಾರಿ ಆದೇಶದಲ್ಲಿ 2013–14ನೇ ಮುಂಗಾರು ಋತುವಿಗೆ (ಕೆಎಂಎಸ್) ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ರೈತರಿಂದ ಖರೀದಿಸುವ ಮೆಕ್ಕೆಜೋಳ ಆವಕವು ಹೆಚ್ಚಾಗುತ್ತಿದ್ದರಿಂದ ಶೇಖರಣೆ ಮಾಡಲು ಗೋದಾಮುಗಳಲ್ಲಿ ಸ್ಥಳವಕಾಶ ತೊಂದರೆಯಿರುವುದರಿಂದ ಮೆಕ್ಕೆಜೋಳದ ಪ್ರಮಾಣದ ಮಿತಿಯನ್ನು ಗರಿಷ್ಠ 75 ಕ್ವಿಂಟಾಲ್‌ಗೆ ನಿಗಧಿಪಡಿಸಲಾಗಿತ್ತು. ಆದರೆ, ಮುಕ್ತ ಮಾರುಕಟ್ಟೆಯಲ್ಲಿ ಮೆಕ್ಕೆಜೋಳದ ಬೆಲೆಯು ಏರಿಕೆಯಾಗಿರುವುದರಿಂದ ರೈತರ ಹಿತವನ್ನು ಕಾಪಾಡುವ ದೃಷ್ಟಿಯಿಂದ ಖರೀದಿ ಮಿತಿಯನ್ನು ನಿರ್ಧರಿಸಿದೆ. ಅದರಂತೆ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆನಾಸ 13 ಆರ್‌ಪಿಆರ್ 2013, ಬೆಂಗಳೂರು, ದಿನಾಂಕ : 30–01–2014.**

2013–14ನೇ ಸಾಲಿನ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ರೈತರಿಂದ ಖರೀದಿಸುವ ಮೆಕ್ಕೆಜೋಳ ದಾಸ್ತಾನಿಗೆ ಹಿಂದೆ ನಿಗಧಿಪಡಿಸಿದ್ದ 75 ಕ್ವಿಂಟಾಲ್ ಖರೀದಿ ಮಿತಿಯನ್ನು ಈ ಕೂಡಲೇ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ ಹಾಗೂ ಇನ್ನು ಮುಂದೆ ಖರೀದಿಗೆ ಯಾವುದೇ ಮಿತಿಯಿರುವುದಿಲ್ಲ.

2) 2013–14ನೇ ಮುಂಗಾರು ಋತುವಿನ ಮೆಕ್ಕೆಜೋಳ ಖರೀದಿ ಅವಧಿಯನ್ನು ದಿನಾಂಕ : 28–02–2014ಕ್ಕೆ ಅಂತ್ಯಗೊಳಿಸತಕ್ಕದ್ದು.

3) ಸಂಗ್ರಹಣಾ ಏಜೆನ್ಸಿಗಳು ರೈತರಿಂದ ಮೆಕ್ಕೆಜೋಳ ಖರೀದಿಸಲು ಮುಂಗಡವಾಗಿ ನೀಡಿರುವ ಟೋಕನ್‌ಗಳನ್ನು ದಿನಾಂಕ : 28–02–2014 ರೊಳಗೆ ಸ್ವೀಕರಿಸಿ, ಸಂಗ್ರಹಣಾ ಕಾರ್ಯವನ್ನು ದಿನಾಂಕ : 28–02–2014ಕ್ಕೆ ಅಂತಿಮಗೊಳಿಸತಕ್ಕದ್ದು :

4) ಮೆಕ್ಕೆಜೋಳ ದಾಸ್ತಾನು ಮಾಡಲು ಜಿಲ್ಲೆಗಳಲ್ಲಿ ಲಭ್ಯವಿರುವ ಗೋದಾಮುಗಳ ಎಲ್ಲಾ ಸ್ಥಳಾವಕಾಶವನ್ನು ಉಪಯೋಗಿಸಿಕೊಂಡು ನಂತರ ಅನಿವಾರ್ಯವಾದಲ್ಲಿ ಮಾತ್ರ CAP STORAGE (COVERED AREA PROTECTION) ಮೂಲಕ ಮೆಕ್ಕೆಜೋಳ ನಿರ್ವಹಿಸತಕ್ಕದ್ದು. ಭಾರತ ಆಹಾರ ನಿಗಮವು CAP STORGEಗೆ ಸಂಬಂಧಿಸಿದಂತೆ ಅನುಸರಿಸುವ ವಿಧಿವಿಧಾನವನ್ನು ಪಾಲಿಸಿ ಸಂಗ್ರಹಣೆಯನ್ನು ಮಾಡತಕ್ಕದ್ದು. ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ಮೆಕ್ಕೆಜೋಳದ CAP STORGE ಗಾಗಿ ಬಯಲು ಪ್ರದೇಶವನ್ನು ಗುರುತಿಸಿ, ಮೆಕ್ಕೆಜೋಳವನ್ನು ದಾಸ್ತಾನು ಮಾಡಲು ಅಗತ್ಯ ಸಿಬ್ಬಂದಿ ಹಾಗೂ ಭದ್ರತೆ ಒದಗಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**PR. 290**
**SC-200**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ** : ಅನ್ನಭಾಗ್ಯ ಯೋಜನೆಯಡಿಯಲ್ಲಿ ಬಿಪಿಎಲ್ ಪಡಿತರ ಚೀಟಿದಾರರಿಗೆ ರಾಗಿ ಧಾನ್ಯವನ್ನು ವಿತರಣೆ ಮಾಡುವ ಬಗ್ಗೆ.

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ರಾಗಿ ಮತ್ತು ಬಿಳಿಜೋಳವನ್ನು ಸಾರ್ವಜನಿಕ ವಿತರಣಾ ಪದ್ಧತಿಯಡಿಯಲ್ಲಿ ಪಡಿತರ ಚೀಟಿದಾರರಿಗೆ ವಿತರಿಸಲು ಸರ್ಕಾರವು ಆದೇಶಿಸಿದೆ. ಈ ಹಿನ್ನೆಲೆಯಲ್ಲಿ ಅವಶ್ಯಕವಿರುವ ಪ್ರಮಾಣವನ್ನು ಸರ್ಕಾರವು ರೈತರಿಂದ ಕನಿಷ್ಠ ಬೆಂಬಲ ಬೆಲೆ ಯೋಜನೆಯಲ್ಲಿ ಹಾಗೂ ಮುಕ್ತ ಮಾರುಕಟ್ಟೆಯಡಿಯಲ್ಲಿ ಇ–ಟೆಂಡರ್ ಮೂಲಕ ಖರೀದಿಸಲು ಸರ್ಕಾರವು ತೀರ್ಮಾನಿಸಿದೆ. ಕರ್ನಾಟಕ ಆಹಾರ, ನಾಗರೀಕ ಸರಬರಾಜು ನಿಗಮವು ಈವರೆವಿಗೂ ಒಟ್ಟು 8029 ಮೆ.ಟನ್ ರಾಗಿಯನ್ನು ಖರೀದಿಸಿರುತ್ತದೆ. ಪ್ರಸ್ತುತ ಲಭ್ಯವಿರುವ ರಾಗಿಯನ್ನು ಹೆಚ್ಚಿನ ಪ್ರಮಾಣದಲ್ಲಿ ಉಪಯೋಗಿಸುವ ಮೈಸೂರು, ಮಂಡ್ಯ ಮತ್ತು ಹಾಸನ ಜಿಲ್ಲೆಗಳ ಒಂದು ಮತ್ತು ಎರಡು ಸದಸ್ಯ ಹೊಂದಿರುವ ಬಿಪಿಎಲ್ ಪಡಿತರ ಚೀಟಿದಾರರಿಗೆ ಪ್ರತಿ ಮಾಹೆಗೆ 12 ಕೆ.ಜಿಯಂತೆ ಹಾಗೂ ಮೂರು ಮತ್ತು ಅದಕ್ಕಿಂತ ಹೆಚ್ಚಿನ ಸದಸ್ಯರನ್ನು ಹೊಂದಿರುವ ಬಿಪಿಎಲ್ ಪಡಿತರ ಚೀಟಿದಾರರಿಗೆ ಪ್ರತಿ ಮಾಹೆಗೆ 2 ಕೆ.ಜಿ.ಯಂತೆ, ಪ್ರತಿ ಕೆ.ಜಿ.ಗೆ ರೂ. 1/–ರ ದರದಲ್ಲಿ ಪ್ರಾಯೋಗಿಕವಾಗಿ ಮಾರ್ಚ್ 2014 ರಿಂದ ಜೂನ್ 2014ರ ಮಾಹೆಯವರೆವಿಗೂ ವಿತರಿಸಲು ಸರ್ಕಾರವು ಪರಿಶೀಲಿಸಿದ್ದು, ಅದರಂತೆ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆನಾಸ 312 ಡಿಆರ್‌ಎ 2013, ಬೆಂಗಳೂರು, ದಿನಾಂಕ : 12–02–2014.**

ಮೈಸೂರು, ಮಂಡ್ಯ ಮತ್ತು ಹಾಸನ ಜಿಲ್ಲೆಗಳ ಒಂದು ಮತ್ತು ಎರಡು ಸದಸ್ಯ ಹೊಂದಿರುವ ಬಿಪಿಎಲ್ ಪಡಿತರ ಚೀಟಿಗೆ ಪ್ರತಿ ಮಾಹೆಗೆ 1 ಕೆ.ಜಿ.ಯಂತೆ ರಾಗಿಯನ್ನು (ಅಂದರೆ ಒಂದು ಸದಸ್ಯ ಹೊಂದಿರುವ ಪಡಿತರ ಚೀಟಿದಾರರಿಗೆ 7 ಕೆ.ಜಿ. ಅಕ್ಕಿ, 2 ಕೆ.ಜಿ. ಗೋಧಿ ಮತ್ತು 1 ಕೆ.ಜಿ. ರಾಗಿ ಹಾಗೂ ಎರಡು ಸದಸ್ಯ ಹೊಂದಿರುವ ಪಡಿತರ ಚೀಟಿದಾರರಿಗೆ 15 ಕೆ.ಜಿ. ಅಕ್ಕಿ, 4 ಕೆ.ಜಿ. ಗೋಧಿ ಮತ್ತು 1 ಕೆ.ಜಿ. ರಾಗಿ) ಹಾಗೂ ಮೂರು ಮತ್ತು ಅದಕ್ಕಿಂತ ಹೆಚ್ಚಿನ ಸದಸ್ಯರನ್ನು ಹೊಂದಿರುವ ಬಿಪಿಎಲ್ ಪಡಿತರ ಚೀಟಿಗೆ ಪ್ರತಿ ಮಾಹೆಗೆ 2 ಕೆ.ಜಿ. ರಾಗಿಯನ್ನು (ಅಂದರೆ 22 ಕೆ.ಜಿ. ಅಕ್ಕಿ, 6 ಕೆ.ಜಿ. ಗೋಧಿ ಮತ್ತು 2 ಕೆ.ಜಿ ರಾಗಿ) ಪ್ರತಿ ಕೆ.ಜಿ.ಗೆ ರೂ. 1/–ರ ದರದಲ್ಲಿ ಪ್ರಾಯೋಗಿಕವಾಗಿ ಮಾರ್ಚ್ 2014 ರಿಂದ ಜೂನ್ 2014ರ ಮಾಹೆಯವರೆವಿಗೂ ಸಾರ್ವಜನಿಕ ವಿತರಣಾ ಪದ್ಧತಿಯಡಿಯಲ್ಲಿ ವಿತರಿಸಲು ಸರ್ಕಾರವು ಆದೇಶಿಸಿದೆ.

2) ಆಯುಕ್ತರು, ಆನಾಸ ಇಲಾಖೆ ಇವರು ಪ್ರತಿ ಮಾಹೆಯು ಮೇಲಿನ ಮೂರು ಜಿಲ್ಲೆಗಳ ಬಿಪಿಎಲ್ ಪಡಿತರ ಚೀಟಿಗಳ ಕುಟುಂಬ ಸದಸ್ಯರ ಸಂಖ್ಯೆಗೆ ಅನುಗುಣವಾಗಿ ಲೆಕ್ಕಾಚಾರ ಮಾಡಿ ಹಂಚಿಕೆಯನ್ನು ಬಿಡುಗಡೆ ಮಾಡತಕ್ಕದ್ದು.

3) ಈ ಮೂರು ಜಿಲ್ಲೆಗಳ ಜಿಲ್ಲಾಧಿಕಾರಿಗಳು ಬಿಪಿಎಲ್ ಪಡಿತರ ಚೀಟಿದಾರರಿಗೆ ರಾಗಿಯನ್ನು ಸಾರ್ವಜನಿಕರ ವಿತರಣಾ ಪದ್ಧತಿಯಡಿಯಲ್ಲಿ ವಿತರಣೆ ಮಾಡಲಾಗುವುದನ್ನು ಹೆಚ್ಚಿನ ಪ್ರಚಾರದ ಮೂಲಕ ಮಾಹಿತಿಯನ್ನು ನೀಡಿ, ಸಂಬಂಧಪಟ್ಟ ನ್ಯಾಯಬೆಲೆ ಅಂಗಡಿಗಳ ಸೂಚನಾ ಫಲಕದಲ್ಲಿ ನಮೂದಿಸಲು ಕ್ರಮವಹಿಸತಕ್ಕದ್ದು.

4) ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮವು ಕನಿಷ್ಠ ಬೆಂಬಲ ಬೆಲೆ ಯೋಜನೆ/ಇ–ಟೆಂಡರ್‌ನಲ್ಲಿ ವಿವಿಧ ಜಿಲ್ಲೆಗಳಲ್ಲಿ ರಾಗಿಯನ್ನು ಖರೀದಿಸಿದ್ದು, ಇದನ್ನು ಮೇಲಿನ ಮೂರು ಜಿಲ್ಲೆಗಳಿಗೆ ಸಾಗಾಣಿಕೆ ಮಾಡಿ ಸಾ.ವಿ.ಪ. ಅಡಿಯಲ್ಲಿ ವಿತರಿಸಲು ಕ್ರಮವಹಿಸತಕ್ಕದ್ದು.

5) ಈ ಸಂಬಂಧ ತಗಲುವ ವೆಚ್ಚವನ್ನು 2013–14ನೇ ಸಾಲಿನ ಸಹಾಯಧನ ಲೆಕ್ಕ ಶೀರ್ಷಿಕೆ 2408–01–102–0–01–106 (ಯೋಜನೇತರ) ಇದರಲ್ಲಿ ಭರಿತಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**PR. 291**
**SC-200**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ** : ರಾಜ್ಯ ಆಯೋಗ/ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳಲ್ಲಿ ಸದಸ್ಯರನ್ನು ಪೂರ್ಣಾಕಾಲಿಕ/ಅರೆಕಾಲಿಕ ಸದಸ್ಯರೆಂದು ಪರಿಗಣಿಸುವ ಬಗ್ಗೆ.

ಓದಲಾಗಿದೆ :
1. ಸರ್ಕಾರದ ಆದೇಶ ಸಂಖ್ಯೆ : ಆನಾಸ 65 ಸಲಫ 2012, ದಿನಾಂಕ : 21-04-2013.
2. ಸರ್ಕಾರದ ಪತ್ರ ಸಂಖ್ಯೆ : ಆನಾಸ 65 ಸಲಫ 2012, ದಿನಾಂಕ : 13-01-2014 ಮತ್ತು 05-02-2014.
3. ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿ, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬೆಂಗಳೂರು ಇವರ ಪತ್ರ ಸಂ. ರಾಆ/ಲೆಕ್ಕ/ಗ್ರಾ.ವೇ.ಸ/65/2002-03, ದಿನಾಂಕ : 6-2-2014.

**ಪ್ರಸ್ತಾವನೆ :**

ಮೇಲೆ ಓದಲಾದ (2)ರ ಸರ್ಕಾರದ ಪತ್ರದಲ್ಲಿ ರಾಜ್ಯ ಆಯೋಗವನ್ನು 20 ಜಿಲ್ಲಾ ವೇದಿಕೆಗಳ ಕೆಲಸ ಒತ್ತಡದ ವಿವರಗಳನ್ನು ಕೋರಲಾಗಿದ್ದರ ಹಿನ್ನೆಲೆಯಲ್ಲಿ, ಮೇಲೆ ಓದಲಾದ ಕ್ರಮ ಸಂ. (3)ರ ಪತ್ರದಲ್ಲಿ ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಗಳು, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದವರು ದಿನಾಂಕ : 31-12-2013ಕ್ಕೆ ಅಂತ್ಯಗೊಂಡಂತೆ, 2013ನೇ ಸಾಲಿನಲ್ಲಿ ಜಿಲ್ಲಾ ಗ್ರಾಹಕರ ವೇದಿಕೆಗಳಲ್ಲಿ ಬಾಕಿ ಇರುವ ಪ್ರಕರಣಗಳ ಪಟ್ಟಿಯನ್ನು ಈ ಕೆಳಕಂಡಂತೆ ಕಳುಹಿಸಿರುತ್ತಾರೆ.

| ಕ್ರಮ ಸಂಖ್ಯೆ | ಜಿಲ್ಲೆಗಳು | ಬಾಕಿ ಇರುವ ಪ್ರಕರಣಗಳ ಸಂಖ್ಯೆ | ಕ್ರಮ ಸಂಖ್ಯೆ | ಜಿಲ್ಲೆಗಳು | ಬಾಕಿ ಇರುವ ಪ್ರಕರಣಗಳ ಸಂಖ್ಯೆ |
|---|---|---|---|---|---|
| 1. | ಯಾದಗಿರಿ | 20 | 2 | ಉಡುಪಿ | 143 |
| 3 | ಚಾಮರಾಜನಗರ | 91 | 4 | ಕೋಲಾರ | 144 |
| 5. | ಕೊಪ್ಪಳ | 42 | 6 | ಬೀದರ್ | 133 |
| 7. | ಗದಗ | 106 | 8. | ಚಿತ್ರದುರ್ಗ | 66 |
| 9. | ರಾಯಚೂರು | 94 | 10 | ಬಾಗಲಕೋಟೆ | 157 |
| 11. | ದಾವಣಗೆರೆ | 123 | 12 | ಚಿಕ್ಕಮಗಳೂರು | 168 |
| 13. | ಬಿಜಾಪುರ | 117 | 14 | ಗುಲ್ಬರ್ಗಾ | 118 |
| 15. | ಕೊಡಗು | 96 | 16 | ತುಮಕೂರು | 199 |
| 17. | ಮಂಡ್ಯ | 154 | 18 | ಹಾಸನ | 237 |
| 19. | ಹಾವೇರಿ | 213 | 20 | ಬೆಂಗಳೂರು ಗ್ರಾಮಾಂತರ | 24 |

ಸದರಿ ಪಟ್ಟಿಯಲ್ಲಿನ ಮಾಹಿತಿಯನ್ನು ಪರಿಶೀಲಿಸಿ, ಹಾಸನ (237) ತುಮಕೂರು (199) ಮತ್ತು ಹಾವೇರಿ (213) ಜಿಲ್ಲೆಗಳನ್ನು ಹೊರತುಪಡಿಸಿ, ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳಲ್ಲಿನ ಖಾಲಿ ಇರುವ ಸದಸ್ಯರು ಮತ್ತು ಮಹಿಳಾ ಸದಸ್ಯರನ್ನು ಯಾವ ಜಿಲ್ಲಾ ವೇದಿಕೆಗಳಲ್ಲಿ 200 ಕ್ಕಿಂತ ಕಡಿಮೆ ಬಾಕಿ ಪ್ರಕರಣಗಳಿರುವ ಜಿಲ್ಲಾ ವೇದಿಕೆಗಳಲ್ಲಿ, ಹಾಲಿ ಕಾರ್ಯ ನಿರ್ವಹಿಸುತ್ತಿರುವ ಸದಸ್ಯರುಗಳನ್ನು ಹೊರತುಪಡಿಸಿ, ಹೊಸದಾಗಿ ವೇದಿಕೆಗೆ ನೇಮಕಗೊಳ್ಳುವ ಸದಸ್ಯರುಗಳನ್ನು ಅರೆಕಾಲಿಕ ಎಂದು ಪರಿಗಣಿಸಿ, ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆನಾಸ 65 ಸಲಫ 2012, ಬೆಂಗಳೂರು, ದಿನಾಂಕ : 21-02-2014.**

31 ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳ ಪೈಕಿ, ದಿನಾಂಕ : 31-12-2013ಕ್ಕೆ ಅಂತ್ಯಗೊಂಡಂತೆ, ಒಂದು ವರ್ಷದ ಪೂರ್ಣಾವಧಿಯ ಪ್ರಗತಿ ಗಣನೆಗೆ ತೆಗೆದುಕೊಂಡು ಹಾಸನ, ತುಮಕೂರು ಮತ್ತು ಹಾವೇರಿ ಜಿಲ್ಲೆಗಳ ವೇದಿಕೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸದಸ್ಯರುಗಳನ್ನು ಹೊರತುಪಡಿಸಿ, 200 ಪ್ರಕರಣಗಳಿಗಿಂತ ಕಡಿಮೆ ಇರುವಂತಹ ಈ ಕೆಳಕಂಡ 17 ಜಿಲ್ಲಾ ವೇದಿಕೆಗಳಲ್ಲಿ ಖಾಲಿಯಿರುವ ಸದಸ್ಯರುಗಳನ್ನು ಅರೆಕಾಲಿಕ ಎಂದು ಪರಿಗಣಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಜಿಲ್ಲೆಗಳು | ಬಾಕಿ ಇರುವ ಪ್ರಕರಣಗಳ ಸಂಖ್ಯೆ | ಕ್ರಮ ಸಂಖ್ಯೆ | ಜಿಲ್ಲೆಗಳು | ಬಾಕಿ ಇರುವ ಪ್ರಕರಣಗಳ ಸಂಖ್ಯೆ |
|---|---|---|---|---|---|
| 1. | ಯಾದಗಿರಿ | 20 | 2. | ಉಡುಪಿ | 143 |
| 3 | ಚಾಮರಾಜನಗರ | 91 | 4. | ಕೋಲಾರ | 144 |
| 5. | ಕೊಪ್ಪಳ | 42 | 6. | ಬೀದರ್ | 133 |
| 7. | ಗದಗ | 106 | 8. | ಚಿತ್ರದುರ್ಗ | 66 |
| 9. | ರಾಯಚೂರು | 94 | 10. | ಬಾಗಲಕೋಟೆ | 157 |
| 11. | ದಾವಣಗೆರೆ | 123 | 12. | ಚಿಕ್ಕಮಗಳೂರು | 168 |
| 13. | ಬಿಜಾಪುರ | 117 | 14. | ಗುಲ್ಬರ್ಗಾ | 118 |
| 15. | ಕೊಡಗು | 96 | 16. | ಮಂಡ್ಯ | 154 |
| 17. | ಬೆಂಗಳೂರು ಗ್ರಾಮಾಂತರ | 24 | | | |

ಜಿಲ್ಲಾ ವೇದಿಕೆಗಳ ಪೂರ್ಣಕಾಲಿಕ ಸದಸ್ಯರುಗಳಿಗೆ (ಹಾಸನ, ಹಾವೇರಿ ಮತ್ತು ತುಮಕೂರು ಜಿಲ್ಲೆಗಳು) ಗೌರವಧನ ರೂ. 15000/– ಮತ್ತು ಪ್ರಯಾಣ ಭತ್ಯೆ 2000/–ಗಳಂತೆ ಹಾಗೂ ಅರೆಕಾಲಿಕ ಸದಸ್ಯರುಗಳಿಗೆ (17 ಜಿಲ್ಲೆಗಳು) ಒಂದು ದಿನಕ್ಕೆ ಗೌರವಧನ ರೂ. 600/– ಮತ್ತು ಒಂದು ದಿನಕ್ಕೆ ಪ್ರಯಾಣ ಭತ್ಯೆ ರೂ. 150/– ರಂತೆ ಭತ್ಯೆಗಳನ್ನು, ದಿನಾಂಕ : 21–04–2013ರಂದು ಹೊರಡಿಸಿದ ಆದೇಶದ ದಿನಾಂಕದಿಂದ ಪಡೆಯಲು ಅರ್ಹರಿರುತ್ತಾರೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. ಆಇ 1210 ವೆಚ್ಚ–5/2013, ದಿನಾಂಕ: 21–03–2013ರ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಉಪ ಕಾರ್ಯದರ್ಶಿ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

PR. 292

SC-300

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಜಾನುವಾರು ಅಧಿಕಾರಿ ಹುದ್ದೆಯಿಂದ ಜಾನುವಾರು ಅಭಿವೃದ್ಧಿ ಅಧಿಕಾರಿ ಹುದ್ದೆಗೆ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರ ಆದೇಶ ಸಂಖ್ಯೆ: ಪಸಂಮೀ 56 ಪಸಸೇ 2011, ದಿನಾಂಕ: 29.12.2012

2) ಪತ್ರ ಸಂಖ್ಯೆ:ಆಪಸಂ/ಸಿ–(6)/ಭಾಗ–3/ಪಇಪು/05–06/10–11, ದಿನಾಂಕ: 24.01.2013 ಮತ್ತು –05.2013.

3) ಪತ್ರ ಸಂಖ್ಯೆ: ಆಪಸಂ/ಸಿಬ್ಬಂದಿ–1 ಬಿ /ಭಾಗ–3/ಪಇಪು/2005–06, ದಿನಾಂಕ: 03.07.2013

**ಪ್ರಸ್ತಾವನೆ:**

ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಪುನರ್ ರಚನೆಗೆ ಮಂಜೂರಾತಿಯನ್ನು ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ನೀಡಲಾಗಿದೆ.

ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ ಇವರು ಮೇಲೆ ಕ್ರಮ ಸಂಖ್ಯೆ(2) ಮತ್ತು (3) ರಲ್ಲಿ ಓದಲಾದ ಪತ್ರಗಳಲ್ಲಿ, ಇಲಾಖಾ ಪುನರ್ ರಚನೆ ಆದೇಶ ಸಂಖ್ಯೆ: ಪಸಂಮೀ 56 ಪಸಸೇ 2011, ದಿನಾಂಕ:29.12.2012 ರಲ್ಲಿ ಪಶುವೈದ್ಯಕೀಯ ಪರೀಕ್ಷಕರ ವೃಂದದ ಮುಂಬಡ್ತಿ ಹುದ್ದೆಯಾದ ಜಾನುವಾರು ಅಭಿವೃದ್ಧಿ ಅಧಿಕಾರಿ ಹುದ್ದೆಯ 150 ಹುದ್ದೆಗಳು ಮಂಜೂರಾಗಿದ್ದು, ಪುನರ್ ರಚನೆ ಸಂಬಂಧದ ಉನ್ನತಮಟ್ಟದ ಸಮಿತಿಯಲ್ಲಿ ಈ ಹುದ್ದೆಯನ್ನು ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಸೃಜಿಸಲು ಶಿಫಾರಸ್ಸು ಆಗಿದ್ದು, ಜಾನುವಾರು ಅಧಿಕಾರಿಗಳ 577 ಹುದ್ದೆಗಳ ಬದಲಾಗಿ 500 ಹುದ್ದೆಗಳನ್ನು ಹಾಗೂ ವೇತನ ಶ್ರೇಣಿಯನ್ನು ರೂ.17,650–32,000 ಬದಲಾಗಿ ರೂ.20,000–36,300 ಕ್ಕೆ ಹೆಚ್ಚಿಸಲು ಹಾಗೂ 150 ಜಾನುವಾರು ಅಭಿವೃದ್ಧಿ ಅಧಿಕಾರಿಗಳ ಹುದ್ದೆಗಳ ಬದಲಾಗಿ 227 ಹುದ್ದೆಗಳನ್ನು ಹಾಗೂ ವೇತನ ಶ್ರೇಣಿ ರೂ.21,600–40,050 ರ ಬದಲಾಗಿ ರೂ.22,800–43,200 ಗಳಿಗೆ ಹೆಚ್ಚಿಸಿ ನಿಗಧಿಪಡಿಸಿ, ಮಾಹೆಯಾನ ನೀಡುತ್ತಿರುವ ವಿಶೇಷ ಭತ್ಯೆಯನ್ನು ರೂ.400/–ರ ಬದಲಾಗಿ ರೂ. 1000/– ಹೆಚ್ಚಿಸುವಂತೆ ಹಾಗೂ ಮುಂಬಡ್ತಿ ಹುದ್ದೆಯಾದ ಜಾನುವಾರು ಅಭಿವೃದ್ಧಿ ಅಧಿಕಾರಿ ಹುದ್ದೆಗಳನ್ನು ತಾಲ್ಲೂಕು ಮಟ್ಟದ 146 ಪಶು ಆಸ್ಪತ್ರೆಗಳಿಗೆ, ಪಾಲಿಕ್ಲಿನಿಕ್‌ಗಳಿಗೆ, ಜಿಲ್ಲಾ ಕಚೇರಿ ಹಾಗೂ ವಿವಿಧ ಜಾನುವಾರು/ಕುಕ್ಕುಟ/ಕ್ಷೇತ್ರಗಳಿಗೆ ನಿಗಧಿಪಡಿಸುವಂತೆ ಪ್ರಸ್ತಾಪಿಸಿರುತ್ತಾರೆ.

ಮುಂದುವರೆದು, ಇಲಾಖಾ ಪುನರ್ ರಚನೆಯಲ್ಲಿ ಜಿಲ್ಲಾ ಹಂತ, ತಾಲ್ಲೂಕು ಹಂತಗಳಲ್ಲಿ ವಿವಿಧ ಸಂಸ್ಥೆಗಳನ್ನು ಗುರುತಿಸಲಾಗಿದ್ದು, ಆಯಾಯ ಹಂತದ ಸಂಸ್ಥೆಗಳಿಗೆ ಏಕರೂಪದ ಸಿಬ್ಬಂದಿಯನ್ನು ನಿಗಧಿಪಡಿಸಲಾಗಿದ್ದು, ಅದರಂತೆ, ತಾಲ್ಲೂಕು ಹಂತದ ಪಶು ಆಸ್ಪತ್ರೆಗಳಿಗೆ, ಜಾನುವಾರು ಕ್ಷೇತ್ರಗಳಿಗೆ ಮತ್ತು ಪಾಲಿಕ್ಲಿನಿಕ್‌ಗಳಿಗೆ ಜಾನುವಾರು ಅಭಿವೃದ್ಧಿ ಅಧಿಕಾರಿಗಳ ಹುದ್ದೆಗಳನ್ನು ಪ್ರಸ್ತಾಪಿಸಿದ್ದು, ಅದರಲ್ಲಿ 150 ಹುದ್ದೆಗಳು ಮಂಜೂರಾಗಿದ್ದು, ತಾಲ್ಲೂಕು ಹಂತದ ಸಂಸ್ಥೆಗಳಿಗೆ ಹಾಗೂ 30 ಪಾಲಿಕ್ಲಿನಿಕ್‌ಗಳಿಗೆ ಹುದ್ದೆಗಳನ್ನು ಗುರುತಿಸಲು ಸಾಧ್ಯವಾಗುತ್ತಿಲ್ಲವೆಂದು, ಇನ್ನೂ 77 ಜಾನುವಾರು ಅಭಿವೃದ್ಧಿ ಅಧಿಕಾರಿಗಳ ಹುದ್ದೆಗಳನ್ನು ಮೇಲ್ದರ್ಜೆಗೇರಿಸುವ ಮೂಲಕ ಸೃಜಿಸುವಂತೆ ಹಾಗೂ ಸಮಾನ ವಿದ್ಯಾರ್ಹತೆ ಹೊಂದಿದ ಇತರೆ ಇಲಾಖೆಯ ಹುದ್ದೆಗಳಿಗೆ ವೇತನ ಶ್ರೇಣಿ ನಿಗಧಿಯಾಗಿರುವಂತೆ ಜಾನುವಾರು ಅಧಿಕಾರಿಗಳಿಗೆ ರೂ.17,650–32,000 ರಿಂದ ರೂ.20,000–36,300 ಗಳಿಗೆ ಹೆಚ್ಚಿಸಿ ನಿಗಧಿಪಡಿಸಲು ಮತ್ತು ಮುಂಬಡ್ತಿ ಹುದ್ದೆಯಾದ ಜಾನುವಾರು ಅಭಿವೃದ್ಧಿ ಅಧಿಕಾರಿಗಳಿಗೆ ವೇತನ ಶ್ರೇಣಿ ರೂ.21,600–40,050 ರ ಬದಲಾಗಿ ರೂ.22,800–43,200 ಕ್ಕೆ ನಿಗಧಿಗೊಳಿಸಲು ಹಾಗೂ ವಿಶೇಷ ಭತ್ಯೆ ದರವನ್ನು ಮಾಸಿಕ ರೂ.400/– ರಿಂದ ರೂ.750/– ಕ್ಕೆ ಹೆಚ್ಚಿಸಿ ನಿಗಧಿಪಡಿಸುವಂತೆ ಆಯುಕ್ತರು ತಿಳಿಸಿರುತ್ತಾರೆ.

ಇಲಾಖಾ ಪುನರ್ ರಚನೆ ಪ್ರಸಾವನೆಯಲ್ಲಿ 176 ತಾಲ್ಲೂಕುಗಳಲ್ಲಿ ಜಾನುವಾರು ಅಭಿವೃದ್ಧಿ ಅಧಿಕಾರಿ ಹುದ್ದೆ ಸೃಜಿಸಲು ಪ್ರಸ್ತಾಪಿಸಲಾಗಿದ್ದು, ಪ್ರಸ್ತುತ ಮಂಜೂರಾದ 150 ಹುದ್ದೆಗಳಲ್ಲಿ 30 ಹುದ್ದೆಗಳನ್ನು 30 ಪಾಲಿಕ್ಲಿನಿಕ್‌ಗಳಿಗೆ ಗುರುತಿಸಲಾಗಿದ್ದು, ಉಳಿದ ಹುದ್ದೆಯಲ್ಲಿ 21 ಜಾನುವಾರು ಕ್ಷೇತ್ರಗಳಿಗೆ, 99 ಹುದ್ದೆಗಳನ್ನು ತಾಲ್ಲೂಕು ಹಂತದ ಪಶು ಆಸ್ಪತ್ರೆಗಳಿಗೆ ಗುರುತಿಸಿರುವುದರಿಂದ 146 ತಾಲ್ಲೂಕುಗಳಿಗೂ ಏಕ ರೂಪದ ಸಿಬ್ಬಂದಿ ಮಾದರಿ ನಿಗಧಿಪಡಿಸಲು ಅಡಚಣೆಯಾಗಿರುವುದರಿಂದ ಉಳಿದ 47 ತಾಲ್ಲೂಕು ಪಶು ಆಸ್ಪತ್ರೆಗಳಿಗೆ ಮತ್ತು 30 ಉಪ ನಿರ್ದೇಶಕರ ಕಚೇರಿಗಳಿಗೆ 30 ಜಾನುವಾರು ಅಭಿವೃದ್ಧಿ ಅಧಿಕಾರಿ ಸೃಜಿಸಲು ಆಯುಕ್ತರು ಪ್ರಸ್ತಾಪಿಸಿ, ಈ ಹುದ್ದೆಗಳ ನಿರ್ವಹಣೆಯ ಬಗ್ಗೆ ಕೆಳಕಂಡಂತೆ ವಿವರಿಸಿರುತ್ತಾರೆ.

1. ತಾಲ್ಲೂಕು ಮಟ್ಟದ ವ್ಯಾಪ್ತಿಯ ಒಳಗೆ ಬರುವ ಎಲ್ಲಾ ಪಶುವೈದ್ಯಕೀಯ ಸಂಸ್ಥೆಗಳಿಗೆ ಭೇಟಿ ನೀಡಿ ಕೃತಕ ಗರ್ಭಧಾರಣಾ ವರದಿ, ಗರ್ಭಧಾರಣೆ ವರದಿ, ಕರುಗಳ ಜನನ ಮತ್ತು ಲಸಿಕೆ ವರದಿಗಳನ್ನು ಪರಿಶೀಲನೆ ಮಾಡುವುದು.
2. ಪ್ರಚಾರ ಮಾಧ್ಯಮಗಳ ಮೂಲಕ ಜಾನುವಾರು ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ನೇರವಾಗಿ ರೈತರಿಗೆ ತಲುಪುವ ಪ್ರಚಾರ ನೀಡುವುದು.
3. ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಗ್ರಾಮ ಪಂಚಾಯ್ತಿಯಲ್ಲಿ ಸಭೆಗಳಲ್ಲಿ ಇಲಾಖೆ ಪ್ರತಿನಿಧಿಯಾಗಿ ಭಾಗವಹಿಸಿ ಇಲಾಖೆ ಯೋಜನೆ ಮತ್ತು ಕಾರ್ಯಕ್ರಮಗಳ ಬಗ್ಗೆ ವರದಿ ನೀಡುವುದು.
4. ಜಾನುವಾರು ಮಾದರಿ ಸಮೀಕ್ಷೆಗೆ ಸಂಬಂಧಪಟ್ಟವರಿಗೆ ತರಬೇತಿ ಮತ್ತು ಕಾರ್ಯನಿರ್ವಹಿಸುವುದು ಇಲಾಖೆಯ ನೂತನ ಆವಿಷ್ಕಾರಗಳನ್ನು ರೈತರಿಗೆ ತಿಳಿಸುವುದು.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



5. ಆಡಳಿತ ಮತ್ತು ತಾಂತ್ರಿಕ ಕಾರ್ಯನಿರ್ವಹಣೆಯಲ್ಲಿ ಇಲಾಖೆ ಸಾಮಾಜಿಕ ಮತ್ತು ಆರ್ಥಿಕ ಯೋಜನೆಗಳ ಹಾಗೂ ಕರ್ನಾಟಕ 20 ಅಂಶಗಳ ಕಾರ್ಯಕ್ರಮವನ್ನು ಜಾರಿಗೊಳಿಸಲು ಸಹಾಯಕ ನಿರ್ದೇಶಕರಿಗೆ ಸಹಾಯಕರಾಗಿ ಕೆಲಸ ನಿರ್ವಹಿಸುವುದು.
6. ಭೌತಿಕ ತಾಂತ್ರಿಕ ಹಾಗೂ ಕರ್ನಾಟಕ ಸರ್ಕಾರದ 20 ಅಂಶಗಳ ಗುರಿಯನ್ನು ತಾಲ್ಲೂಕು ಸಂಸ್ಥೆಗಳಿಗೆ ಸಹಾಯಕ ನಿರ್ದೇಶಕರ ಮಾರ್ಗದರ್ಶನದಲ್ಲಿ ಹಾಗೂ

   ಪ್ರತಿ ಮಾಹೆಯ ಮಾಸಿಕ ಸಭೆಯಲ್ಲಿ ಸಂಸ್ಥೆಗಳ ಪ್ರಗತಿ ವಿವರಗಳನ್ನು ಪರಿಶೀಲಿಸಿ ಗುರಿ ಸಾಧನೆ ಹಾಗೂ ನ್ಯೂನತೆಗಳ ಬಗ್ಗೆ ಸಹಾಯಕ ನಿರ್ದೇಶಕರಿಗೆ ವರದಿ ಮಾಡುವುದು.
7. ಬರಡು ರಾಸುಗಳ ಚಿಕಿತ್ಸಾ ಶಿಬಿರಗಳನ್ನು ಹಾಗೂ ಕರುಗಳ ಪ್ರದರ್ಶನಗಳನ್ನು ಏರ್ಪಡಿಸುವುದು. ಜಾನುವಾರುಗಳ ಸಾಂಕ್ರಾಮಿಕ ರೋಗದ ಚುಚ್ಚುಮದ್ದು ಹಾಕುವ ಕಾರ್ಯವನ್ನು ನಿರ್ವಹಿಸುವುದು ಹಾಗೂ ಅದರ ಮೇಲು ನಿರ್ವಹಣೆ ನಿರ್ವಹಿಸುವುದು. ಮೇವು ಅಭಿವೃದ್ಧಿ ಕಾರ್ಯಕ್ರಮದ ನಿರೂಪಣೆ ಹಾಗೂ ಅಶಕ್ತ ರೈತರಿಗೆ ಮೇವಿನ ಬೀಜ ಹಾಗೂ ಬೇರು ಒದಗಿಸುವುದು ಹಾಗೂ ಇದರ ಬಗ್ಗೆ ರೈತರಿಗೆ ತಾಂತ್ರಿಕ ಸಹಾಯ ನೀಡುವುದು.
8. ಕೇಂದ್ರಗಳಲ್ಲಿ ಔಷಧಿಯ ದಾಸ್ತಾನು ನಿರ್ವಹಣೆ ಹಾಗೂ ವಿತರಿಸುವ ಕಾರ್ಯ ನಿರ್ವಹಣೆ ಮತ್ತು ಅದರ ಮೇಲ್ವಿಚಾರಣೆ.
9. ವೀರ್ಯ, ಲಸಿಕೆ ಹಾಗೂ ಜೈವಿಕ ಸಂಗ್ರಹಣೆ ಹಾಗೂ ವಿತರಣೆಯ ಮೇಲ್ವಿಚಾರಣೆ ಮಾಡುವುದು. ಸಾಂಕ್ರಾಮಿಕ ರೋಗ ಪ್ರತಿಬಂಧಕ ಲಸಿಕೆಗಳನ್ನು ಆಯೋಜಿಸುವುದು ಮತ್ತು ಮೇಲ್ವಿಚಾರಣೆ ಮಾಡುವುದು. ಸರ್ಕಾರಿ ಯೋಜನೆಗಳನ್ನು ಅನುಷ್ಠಾನಗೊಳಿಸಲು ಸಹಾಯಕ ನಿರ್ದೇಶಕರಿಗೆ ಸಹಾಯ ಮಾಡುವುದು. ಕೋಳಿ, ಕುರಿ, ಹಂದಿ, ಮೊಲ ಸಾಕಾಣಿಕೆ ಬಗ್ಗೆ ರೈತರಿಗೆ ಸಲಹೆ ನೀಡುವುದು.
10. ಹೊರ ಮತ್ತು ಒಳ ರೋಗಿಯ ಚಿಕಿತ್ಸೆಯ ಬಗ್ಗೆ ಕೆಲಸ ನಿರ್ವಹಿಸುವುದು.
11. ಪ್ರಕೃತಿ ವಿಕೋಪ ಪ್ರದೇಶಗಳಲ್ಲಿ ಏರ್ಪಡಿಸಿದ ಜಾನುವಾರು ಶಿಬಿರಗಳ ಜಾನುವಾರು ಪೋಷಣೆ, ಆರೋಗ್ಯ ರಕ್ಷಣೆ ಮತ್ತು ಚಿಕಿತ್ಸಾ ಕಾರ್ಯಕ್ರಮಗಳ ನಿರ್ವಹಣೆ

ಮುಂದುವರೆದು, ಉಪ ನಿರ್ದೇಶಕರ ಕಛೇರಿ, ಜಾನುವಾರು ಅಭಿವೃದ್ದಿ ಅಧಿಕಾರಿಗಳ ಹುದ್ದೆಗಳಿಗೆ ಸಂಬಂಧಿಸಿದ ಕಾರ್ಯ ನಿರ್ವಹಣೆ ಕೆಳಕಂಡಂತಿದೆ.

1. ಎಲ್ಲಾ ತಾಲ್ಲೂಕುಗಳಿಂದ ಬರುವ ಪ್ರಗತಿ ವರದಿಗಳನ್ನು ಕ್ರೊಢೀಕರಿಸಿ ಗಣಕೀಕರಿಸುವುದು.
2. ಉಪ ನಿರ್ದೇಶಕರ ಕಛೇರಿಯ ತಾಂತ್ರಿಕ ಸಹಾಯಕರಿಗೆ ತಾಂತ್ರಿಕ ವಿಷಯಗಳಿಗೆ ಸಹಾಯಕರಾಗಿ ಕರ್ತವ್ಯ ನಿರ್ವಹಿಸುವುದು.
3. ತಾಲ್ಲೂಕುಗಳಲ್ಲಿ ಮಾಡುವ ಋತುಮಾನಗಳಲ್ಲಿ ನಡೆಯುವ ಲಸಿಕೆ ಕಾರ್ಯಕ್ರಮದ ವರದಿಯನ್ನು ಪಡೆಯುವುದು.
4. ಬರಗಾಲ ಪರಿಸ್ಥಿತಿಯಲ್ಲಿ ಮೇವು ಸಂಗ್ರಹಣೆ ಹಾಗೂ ಕಾರ್ಯಕ್ರಮಗಳಲ್ಲಿ ಮೇಲಿನ ಅಧಿಕಾರಿಗಳಿಗೆ ಸಹಾಯಕರಾಗಿ ಕೆಲಸ ಮಾಡುವುದು.

ಮೇಲ್ಕಂಡ ಪ್ರಸ್ತಾವನೆಯನ್ನು ಸಂಬಂಧಿಸಿದ ಎಲ್ಲಾ ದಾಖಲೆಗಳೊಂದಿಗೆ ಪರಿಶೀಲಿಸಿ, ಕೆಳಕಂಡ ಆದೇಶ

**ಸರ್ಕಾರದ ಆದೇಶ ಸಂಖ್ಯೆ; ಪಸಂಮೀ 11 ಪಅವಿ 2013 ಬೆಂಗಳೂರು, ದಿನಾಂಕ; 02-01-2014.**

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 56 ಪಸಸೇ 2011 ದಿನಾಂಕ: 29.12.2012 ರ ಆದೇಶದನ್ವಯ ಪಶುಪಾಲನೆ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಜಾನುವಾರು ಅಧಿಕಾರಿಗಳ ಹುದ್ದೆಯನ್ನು ಮೇಲ್ದರ್ಜೆಗೇರಿಸುವ ಮೂಲಕ 150 ಜಾನುವಾರು ಅಭಿವೃದ್ಧಿ ಅಧಿಕಾರಿಗಳ ಹುದ್ದೆಯನ್ನು ಸೃಜಿಸಲಾಗಿತ್ತು. ಮುಂದುವರೆದು, ಜಾನುವಾರು ಅಧಿಕಾರಿ ವೃಂದದಿಂದ 77 ಹುದ್ದೆಗಳನ್ನು ಜಾನುವಾರು ಅಭಿವೃದ್ಧಿ ಅಧಿಕಾರಿ ಹುದ್ದೆಗೆ ಮೇಲ್ದರ್ಜೆಗೇರಿಸಿದೆ. ಅದರಂತೆ, ಸದರಿ ಹುದ್ದೆಗಳ ಪರಿಷ್ಕೃತ ವೃಂದ ಬಲ ಕೆಳಕಂಡಂತಿದೆ.

| **ವೃಂದ** | **ಪ್ರಸ್ತುತ ಮಂಜೂರಾದ ಬಲ** | **ಕೆಳ ವೃಂದದಿಂದ ಮೇಲ್ದರ್ಜೆಗೇರಿಸಿದ ಹುದ್ದೆಗಳು** | **ಮೇಲಿನ ವೃಂದಕ್ಕೆ ಮೇಲ್ದರ್ಜೆಗೇರಿಸಿದ್ದರಿಂದ ಕಡಿತಗೊಂಡ ಹುದ್ದೆಗಳು** | **ಸೃಜನೆ** | **ಪರಿಷ್ಕೃತ ಮಂಜೂರಾದ ಬಲ** |
|---|---|---|---|---|---|
| ಜಾನುವಾರು ಅಭಿವೃದ್ಧಿ ಅಧಿಕಾರಿ | – | 227 | – | – | 227 |
| ಜಾನುವಾರು ಅಧಿಕಾರಿ | 295 | 391 | 227 | 41 | 500 |

ಪಶುಪಾಲನೆ ಮತ್ತು ಪಶುವೈದ್ಯ ಸೇವಾ ಇಲಾಖೆಯ ಪಶುವೈದ್ಯಕೀಯೇತರರಾದ (ಪ್ಯಾರಾ ವೆಟರಿನೇನಿಯನ್) ಜಾನುವಾರು ಅಭಿವೃದ್ಧಿ ಅಧಿಕಾರಿ, ಜಾನುವಾರು ಅಧಿಕಾರಿ, ಹಿರಿಯ ಪಶುವೈದ್ಯಕೀಯ ಪರೀಕ್ಷಕರು, ಪಶುವೈದ್ಯಕೀಯ ಪರೀಕ್ಷಕರು ಹಾಗೂ ಪಶುವೈದ್ಯಕೀಯ ಸಹಾಯಕರ ಮಾಸಿಕ ವಿಶೇಷ ಭತ್ಯೆಯನ್ನು ರೂ.400/- ರಿಂದ ರೂ.500/- ಕ್ಕೆ ಹೆಚ್ಚಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಅ.ಟಿ. ಸಂ:ಆಇ 173 ವೆ-4/2013, ದಿನಾಂಕ: 14.11.2013 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಪ್ರಸನ್ನ**
ಪೀಠಾಧಿಕಾರಿ-2,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಪಶುಸಂಗೋಪನೆ-ಎ)

**PR. 203**
**SC-100**

*ಮುದ್ರಕರು ಹಾಗೂ ಪ್ರಕಾಶಕರು:-* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು-59